ಶ್ರೀ ಪ್ರಸನ್ನ ವೆಂಕಟದಾಸಾರ್ಯ ವಿರಚಿತ

# ಬಿಡೆನೊ ನಿನ್ನಂಘ್ರಿ ಶ್ರೀನಿವಾಸ

ಶ್ರೀ ಪ್ರಸನ್ನ ವೆಂಕಟದಾಸರ ಸಮಗ್ರ ಕೃತಿಗಳಲ್ಲಿ ಆದ್ಯಾತ್ಮಿಕ ಒಳನೋಟ

ಸಂಪುಟ – ೨



ಕೆ. ಅಪ್ಪಣ್ಣಚಾರ್ಯ

**ಶ್ರೀ ಪ್ರಸನ್ನವೆಂಕಟ ದಾಸರ ಸಮಗ್ರ ಕೃತಿಗಳಲ್ಲಿಯ ಆಧ್ಯಾತ್ಮಿಕ ಒಳನೋಟ**

**ಸಂಪುಟ – ೨**

# "ಬಿಡೆನೋ ನಿನ್ನಂಘ್ರಿ ಶ್ರೀನಿವಾಸ"

**ಒಳನೋಟ**


ಲೇಖಕರು

**ಕೆ. ಅಪ್ಪಣ್ಣಾಚಾರ್ಯ**

ನಿವೃತ್ತ ವಿಶೇಷಾಧಿಕಾರಿ

**ದಾಸಸಾಹಿತ್ಯ ಪ್ರಾಜೆಕ್ಟ್ ತಿರುಮಲ–ತಿರುಪತಿ ದೇವಸ್ಥಾನಗಳು**

ಹರಿಕಥಾಮೃತಸಾರ ಮಂದಿರ, ಕೌತಾಳಗ್ರಾಮಂ (ಮಂಡಲಂ),
ವ್ಹಯಾ ಆದವಾನಿ ಕರ್ನೂಲು ಜಿಲ್ಲಾ, ಆಂಧ್ರಪ್ರದೇಶ





**ಶ್ರೀ ಪ್ರಸನ್ನವೆಂಕಟ ಪ್ರಕಾಶನ**

#೧೫, "ಮಂತ್ರಾಲಯ" (ಪ್ರಶಾಂತಿ ನಗರ)
೯ನೇ "ಬಿ" ಮುಖ್ಯರಸ್ತೆ, ೧೭ನೇ ಅಡ್ಡರಸ್ತೆ
ಇಸ್ರೋ ಲೇಔಟ್, ಬೆಂಗಳೂರು – ೫೬೦೦೭೮
ದೂರವಾಣಿ : ೦೮೦–೨೬೬೬೫೩೮, ಮೊಬೈಲ್ : 9448011954
Email : rsk9651@yahoo.com/subhasbk@gmail.com
trust@prasannavenkatadasaru.org
website : www.prasannavenkatadasaru.org

**SHRI PRASANNA VENKAT DASARA KRATIGALLAIYA ADHYTMIK VALLANOTA - SAMPUT-2, BIDENO INNANGRI SRINIVASA"**

*Written By :* **K. Appanna Charya**
*Published by :* **Sri Prasanna Venkata Publications**
No. 15, "Mantralaya" (Prashantinagar)
9th 'B' Main Road, 17th Cross
ISRO Layout Bangalore - 560078

| | | |
|---|---|---|
| First Impression | : | 2011 |
| Copy right | : | Author |
| Pages | : | vi + 66 = 72 |
| Price | | |
| Copies | : | 1,000 |
| Used Paper | : | 70 GSM Maplitho |
| Cover Page | : | V.raj |

*Copies Available at :*

1. Shrimati : **REKHA KAKHANDAKI**
   No15, 'Mantralaya' Prashantinagar
   9th 'B' Main Road, 17th Cross
   ISRO Layout Bangalore - 560078
   Phone : 080-26665398 Mob : 9448011954
   Email : rsk9651@yahoo.com/subhasbk@gmail.com
   trust@prasannavenkata dasaru.org

2. Dhruvacharya. kakhandaki
   No. 35; 'C' Block
   Sector - 3
   Navangar Bagalkot

ಮುದ್ರಣ :
ವಿಶ್ವಾಸ್ ಪ್ರಿಂಟ್ಸ್
VISHWAS PRINTS
23, 3ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - 18
ದೂರವಾಣಿ : 26604835



## ಸಮರ್ಪಣೆ

ಪ್ರಸನ್ನ ಚಾರಿತ್ರ ಪ್ರಸನ್ನ ಶೋಭನ ವಕ್ತ್ರ
ಪ್ರಸನ್ನಾಪಾಂಗನೇತ್ರ ಪ್ರಸನ್ನಗಾತ್ರ ॥
ಪ್ರಸನ್ನ ವೆಂಕಟಕೃಷ್ಣ ಪ್ರಸನ್ನನಾದರೆ ನಿತ್ಯ
ಪ್ರಸನ್ನ ತರೋಕ್ತಿ ಬಾಹವು ಭಕ್ತಜನಕೆ ॥



**ಶ್ರೀ ಪ್ರಸನ್ನ ವೆಂಕಟದಾಸರು (೧೬೮೦–೧೭೫೨)**

ಶ್ರೀ ಪ್ರಸನ್ನ ವೆಂಕಟದಾಸರ ಅಂತರ್ಯಾಮಿಯಾದ ಶ್ರೀ ವೆಂಕಟೇಶ ದೇವರ ದಿವ್ಯಚರಣಾರವಿಂದಗಳಲ್ಲಿ ಈ ಕೃತಿಯನ್ನು ಭಕ್ತಿಪೂರ್ವಕವಾಗಿ ಸಮರ್ಪಿಸುತ್ತಿದ್ದೇವೆ.

# ಎರಡು ನಮನ ಕುಸುಮಗಳು

ಪ್ರಸನ್ನವೇಂಕಟದಾಸರು, ಹರಿದಾಸಸಾಹಿತ್ಯಾಭಿಮಾನಿಗಳ ಮನಗೆದ್ದ ಹಿರಿಯ ಹರಿದಾಸರು. ಅವರ ಪ್ರತಿಕೃತಿ ರಸರೂಪಿಯಾದ ಭಗವಂತನನ್ನು ಹೊರಚಿಮ್ಮುವ ಬತ್ತದ ರಸಕಾರಂಜಿಗಳು. ನೋಡಿ ಅನುಭವಿಸುವ ಭಾಗ್ಯ ನಮ್ಮದಾಗಬೇಕು. ಅದನ್ನು ಸಹ ಆ ಮಹಿತಾತ್ಮರೇ ಕರುಣಿಸಿ ಜನ್ಮಧನ್ಯ ಮಾಡಬೇಕು. ಶ್ರೀನಿವಾಸನ ಮಹಾಸಾಮ್ರಾಜ್ಯದಲ್ಲಿ, (T.T.Dಯಲ್ಲಿ) ಅವನೇ ಸಾಕಿದ ನಾಯಿಮರಿಯಾಗಿ ಸೇವೆ ಮಾಡುವ ಭಾಗ್ಯ, ಪ್ರಸನ್ನ ವೇಂಕಟದಾಸರಿಂದಲೇ ನನಗೆ ದೊರೆಯಿತು. ನನ್ನ ಅವ್ವ – ಅಪ್ಪ–ಅಮ್ಮ ಇವರಿಂದ ನನಗೆ ಚಿಕ್ಕಂದಿನಿಂದಲೇ ಹರಿದಾಸರಲ್ಲಿ, ಹರಿದಾಸಸಾಹಿತ್ಯದಲ್ಲಿ ಒಲವು ಮೂಡಿತು. ಆ ನನ್ನ ಹಿರಿಯರು ಹರಿದಾಸಸಾಹಿತ್ಯದಿಂದಲೇ ನನ್ನನ್ನು ಹರಸಿ ಬೆಳೆಸಿದರು. "ಬಿಡೆನೋ ನಿನ್ನಂಘ್ರಿ ಶ್ರೀನಿವಾಸ" ಎಂಬ ಪ್ರಸನ್ನವೇಂಕಟ ಕೃತಿಯೆ! ನನ್ನ ಮನ ಸೆಳೆದ ಮೊದಲ ಕೃತಿ. ನನ್ನ ಪಾಲಿನ ತಾರಕಮಂತ್ರ. ಈ ಕೀರ್ತನೆ, ಆ ಕರುಣಾಮೂರ್ತಿಶ್ರೀನಿವಾಸನ ಕರುಣೆಯಿಂದ, ಎಲ್ಲ ಭಜನಾಮಂಡಲಿಗಳ ಸಭ್ಯರಿಗೂ ತಾರಕಮಂತ್ರವಾಯಿತು. ಎಷ್ಟು ಹಾಡುಗಳನ್ನು ಹೇಳಿ ಭಜನೆ ಮಾಡಿದರೂ, ಕೊನೆಯಲ್ಲಿ 'ಬಿಡೆನೋ ನಿನ್ನಂಘ್ರಿ ಶ್ರೀನಿವಾಸ ಕೀರ್ತನೆಯನ್ನು ಹೇಳದಿದ್ದರೆ, ಮೊಸರನ್ನ ಉಣ್ಣದ ಮೃಷ್ಟಾನ್ನ ಭೋಜನದಂತಾಗುವುದು.

ಭಜನಾಮಂಡಲಿಗಳ ಕಾರ್ಯಕ್ರಮಗಳಲ್ಲಿ ಮಕುಟಾಯಮಾನವಾಗಿ, ಭಜನಾ ಮಂಡಲಿಗಳ ಸಭ್ಯರ ಮನಗಳನ್ನು ಪವಿತ್ರಗೊಳಿಸಿದ, ಸುಪ್ರಭಾತ ಕಾರ್ಯಕ್ರಮದಲ್ಲಿ ಈ ಕೀರ್ತನೆಯ ಅರ್ಥಾನುಚಿಂತನೆಯನ್ನು, ಬಹಳಷ್ಟು ಬಾರಿ ಶ್ರೀನಿವಾಸ ಮಾಡಿಸಿದ್ದ. ಕೀರ್ತನೆಯ ಹಿನ್ನೆಲೆಯಲ್ಲಿರುವ ದಾಸರ ಹೃದಯವನ್ನು ಶಬ್ದರೂಪದಲ್ಲಿ ಜೋಡಿಸಿ, ಹೊತ್ತಿಗೆಯ ರೂಪದಲ್ಲಿ ಹೊರತರಬೇಕೆಂಬ ಆಶೆ ಬಹಳ ಉತ್ಕಟವಾಗಿತ್ತು. ನನ್ನ ಬುದ್ಧಿ–ಅಧ್ಯಯನಗಳ ಅಲ್ಪತೆಯನ್ನು ಚಿಂತಿಸಿ ತಟಸ್ಥನಾದೆ. ಸಮಗ್ರಹರಿದಾಸಸಾಹಿತ್ಯವನ್ನು ಆಪೋಶನ ತೆಗೆದುಕೊಂಡ ಅನೇಕ ವಿದ್ವಾಂಸರು ಸಮಾಜದಲ್ಲಿದ್ದರೂ, ಎಲ್ಲರನ್ನು ಬಿಟ್ಟು, ಅಲ್ಪನಾದ ನನ್ನನ್ನು ಈ ಸೇವೆಗೆ ಆರಿಸಿದ ಡಾ. ಸುಭಾಸ್ ಮತ್ತು ರೇಖಾ ಕಾಖಂಡಿಕಿಯವರಿಗೆ ನಾನು ಸದಾ ಕೃತಜ್ಞ. ಕಾಖಂಡಕಿಯವರು ನನ್ನ ಜನ್ಮವನ್ನು ಪಾವನಗೊಳಿಸಿದ್ದಾರೆ. ಅವರಿಗೂ ಹರಿದಾಸರ ವಂಶೀಕರಾದ ಹಿರಿಯರೆಲ್ಲರಿಗೂ ಅನಂತ ಪ್ರಣಾಮಗಳು.

ಎಲ್ಲ ವಿದ್ವಾಂಸರ, ಎಲ್ಲ ಹರಿದಾಸಸಾಹಿತ್ಯಪ್ರೇಮಿಗಳ ಆಶೀರ್ವಾದವನ್ನು ಸದಾ ಬಯಸುವ

**ಕೆ. ಅಪ್ಪಣ್ಣ**

ಹರೇ ಶ್ರೀನಿವಾಸ

# ಪ್ರಕಾಶಕರ ಮಾತು

ಹರಿದಾಸ ಸಾಹಿತ್ಯದಲ್ಲಿ ಯಾವಾಗಲೂ ಭಾವದೀಪ್ತಿಯಾಗಿ ಹರಿದು ಬರುವ ವಾಣಿಯೆಂದರೇ – ಅನನ್ಯ ಆರ್ತಭಾವ, ಭಕ್ತಿಭಾವ, ಹಂಬಲಿಕೆ ಭಾವ, ಅನವರತ ನಿನ್ನನ್ನು ಬಿಡಲಾರೆ ಹರಿಯೇ ನಾನು ನಿನ್ನವನು ಎನ್ನುವ ವಿನಮ್ರಭಾವ, – ಈ ಎಲ್ಲ ಭಾವಗಳು ಮೇಳೈಸಿ ಹರಿದಾಸವಾಣಿಯನ್ನು ವಿನಮ್ರಗೊಳಿಸಿದ್ದು – ದಾಸರ ಕೀರ್ತನೆಗಳು. ಇಂಥ ವಾಣಿ ಶ್ರೀಪ್ರಸನ್ವೇಂಕಟದಾಸರ ವಿನಮ್ರ ಕೀರ್ತನೆಯವಾಣಿ ಕೂಡ.

ಈ ಕೀರ್ತನೆಗಳ ವಿನಮ್ರವಾಣಿಯನ್ನು ಭಕ್ತ ಜನಕ್ಕೆ ತಲುಪಿಸಬೇಕೆಂಬ ದಾಸರ ಪ್ರೇರಣೆಯಂತೆ ಈ ಕಾರ್ಯದಲ್ಲಿ ತೊಡಗಿದ. ನಮ್ಮ ನಿಮ್ಮೆಲ್ಲರ ಸಂಸ್ಥೆಗಳಾದ ಶ್ರೀಪ್ರಸನ್ವೇಂಕಟ ಪ್ರಕಾಶನ ಮತ್ತು ಶ್ರೀಪ್ರಸನ್ವೇಂಕಟ ಕಲ್ಚರಲ್ ಮತ್ತು ಚಾರಿಟೇಬಲ್ ಟ್ರಸ್ಟ್ (ರಿ) ಬೆಂಗಳೂರು, ನಮ್ಮ ಯೋಜನೆ ಪ್ರಕಾರ ಈಗ ಎರಡನೆ ಸಂಪುಟವಾಗಿ ಬರುತ್ತಿರುವ, ದಾಸರ ಕೆಲವು ವಿಶೇಷ ಕೃತಿಗಳನ್ನು ಅರ್ಥಪೂರ್ಣವಾದ ವಿಶ್ಲೇಷಣೆ, ಸತ್ವಯುತವಾದ ತಿರುಳಿನೊಂದಿಗೆ ತಮ್ಮ ಅದ್ಭುತವಾದ ರಚನೆಯೊಂದಿಗೆ ನಮ್ಮದೆರು ಇಟ್ಟವರು ನಾಡಿನ ಹೆಸರಾಂತ ದಾಸ ಸಾಹಿತ್ಯ ವಿದ್ವಾಂಸರು ಮಾನ್ಯ ಶ್ರೀ ಕೆ. ಅಪ್ಪಣ್ಣಾಚಾರ್ಯರು ಹೀಗೆ ಮುಂದೆಯೂ ದಾಸರ ವಿಶೇಷ ಕೃತಿಗಳನ್ನ ಅದರ ಅಂತರಂಗ ಒಳಹೊಕ್ಕು ಸವಿಯಾದಂಥ ಒಳಗಿನ ಆಧ್ಯಾತ್ಮದ ತಿರುಳನ್ನು ಭಕ್ತ ಜನಕ್ಕೆ ತಲುಪಿಸುವ ಮಹಾದಾಸೆ ನಮ್ಮ ಸಂಸ್ಥೆಯದು.

ಇದರಲ್ಲಿ ದಾಸರ ಕೃತಿಯಾದ "ಬಿಡೆನೊ ನಿನ್ನಂಘ್ರಿ ಶ್ರೀನಿವಾಸ", ಇದು ದಾಸರ ಅತ್ಯಂತ ದೀನವಾದ, ಆರ್ತವಾದ – ಹಂಬಲಿಕೆಯ ಅನನ್ಯ ಭಾವವಾದ ಈ ಕೃತಿ ಇವತ್ತು ದಾಸವಾಣಿಯ ಮೇಲ್ಪಂಕ್ತಿಯಲ್ಲಿ ನಿಂತು ತನ್ನದೇ ಶ್ರೇಷ್ಠತೆಯಿಂದ, ವಿಶಿಷ್ಟತೆಯಿಂದ ಭಜನಾಮೃತದಲ್ಲಿ ತನ್ನದೇ ಆದ ಮೆರಗನ್ನು ಹೊತ್ತು ನಿಂತಿದೆ. ಬಹುಶಃ ದಾಸವಾಣಿಗೆ ಪೀಠಿಕೆ ಹಾಕಿಕೊಟ್ಟ ವಾಣಿ ಈ ಕೃತಿ. ಇವತ್ತಿನ ಬಹುಶಃ ಎಲ್ಲರ ನಾಲಿಗೆಯಲ್ಲಿ ಭಕ್ತಿ ಭಾವದಿಂದ ಹರಿದಾಡುವ ನಾಮಾಮೃತ ಕೂಡ. ಇವತ್ತು ಈ ದಾಸರ ಕೃತಿಯಲ್ಲಿ ಅಡಗಿದ ಆಧ್ಯಾತ್ಮಿಕ ತಿರುಳನ್ನು ಅದ್ಭುತವಾದ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಪದರು ಪದರಾಗಿ ಸಾಮಾನ್ಯ ಜನರಿಗೆ ಅರ್ಥವಾಗುವ ಹಾಗೆ ತೆರೆದಿಟ್ಟವರು ಮಾನ್ಯ ಶ್ರೀ ಕೆ. ಅಪ್ಪಣ್ಣಾಚಾರ್ಯರು.

ಇವರು ಬೇರೆಕಾರ್ಯಗಳ ಒತ್ತಡದಲ್ಲಿದ್ದಾಗಲೂ ಅಲ್ಪಸಮಯದಲ್ಲಿ ಈ ವಿಶಿಷ್ಟವಾದ ಕೃತಿ ರಚಿಸಿಕೊಡುವುದಲ್ಲದೆ ಡಿ.ಟಿ.ಪಿಮಾಡಿದ ಕರಡು ಕೃತಿಯನ್ನು ಸಹ ತಿದ್ದುಪಡಿಮಾಡಿದ್ದಾರೆ. ಅವರಿಗೆ ಎಷ್ಟೂ ಕೃತಜ್ಞತೆಗಳನ್ನು ಹೇಳಿದರು ಸಾಲದು. ಅವರಿಂದ ದಾಸರ ಇತರ ಕೃತಿಗಳಲ್ಲಿಯ ಆಧ್ಯಾತ್ಮಿಕ ತಿರುಳನ್ನು ತೆರೆದಿಡುವಂತ ಗ್ರಂಥಗಳನ್ನು ರಚಿಸಿ ನಮ್ಮ ಪ್ರಕಾಶನದ ಮೂಲಕ ದಾಸರ ಭಕ್ತ ಜನಕ್ಕೆ ತಲುಪಿಸು ಅವಕಾಶ ಮಾಡಿಕೊಡಬೇಕೆಂದು ಅವರಲ್ಲಿ ವಿನಂತಿಸುತ್ತಿದ್ದೇವೆ.

ಅಲ್ಪ ಸಮಯದಲ್ಲಿ ಸುಂದರವಾಗಿ ಮುದ್ರಿಸಿದ ವಿಶ್ವಾಸ್ ಪ್ರಿಂಟ್ಸ್ ಹಾಗೂ ಮುಖಪುಟ ವಿನ್ಯಾಸಿಗೊಳಿಸಿದ ವಿ.ರಾಜ್ ಅವರಿಗೂ ನಮ್ಮ ಕೃತಜ್ಞತೆಗಳು.

**ಶ್ರೀಪ್ರಸನ್ನವೆಂಕಟ ಪ್ರಕಾಶನ ಮತ್ತು ಶ್ರೀಪ್ರಸನ್ನವೆಂಕಟ ಕಲ್ಚರಲ್**
**ಆಂಡ್ ಚೇರಿಟೇಬಲ್ ಟ್ರಸ್ಟ್ (ರಿ) ಪರವಾಗಿ**
**ಶ್ರೀಮತಿ ರೇಖಾ ಕಾಖಂಡಕಿ, ಡಾ॥ ಸುಭಾಸ ಕಾಖಂಡಕಿ**



# ಹರೇ ಶ್ರೀನಿವಾಸ

ಭಾರತೀಯರ ನಿಜವಾದ ಸಂಪತ್ತು ವೇದಗಳು. ಇವುಗಳಲ್ಲಿ ಹೇಳದ ವಿಷಯಗಳಿಲ್ಲ. ಸೃಷ್ಟಿರಹಸ್ಯದಿಂದ ಹಿಡಿದು ಮಾನವ ಜೀವನದ ಉನ್ನತಿಗೆ ಬೇಕಾಗುವ ಸಕಲ ಸಾಧನ ಪ್ರಕ್ರಿಯೆಗಳು ಇಲ್ಲಿ ಹೇಳಲ್ಪಟ್ಟಿವೆ. ಪಘಪೆನ್ ಹೋವರ್ ಎನ್ನುವ ಪಾಶ್ಚಾತ್ಯ ವೇದಾಂತಿಯು "ಉಪನಿಷತ್ತಿನಂತೆ ಔನತ್ಯಾಪಾದಕವೂ, ಕ್ಷೇಮಕರವೂ ಆದ ಪದಾರ್ಥವು ಮತ್ತೊಂದಿಲ್ಲ. ಈ ಉಪನಿಷತ್ತು ಜೀವನ ಕಾಲದಲ್ಲಿ ತಾಯಿಯಂತೆ ಸಮಾಶ್ವಾಸನೆ ನೀಡುವದು. ಅವಸಾನ ಕಾಲದಲ್ಲೂ ಸಹ ಈ ಉಪನಿಷಜ್ಜನನಿಯೇ ನನ್ನನ್ನು ಸತ್ಯವಾಗಿ ಸಮಾಶ್ವಾಸಿಸುವಳು" ಎಂದು ನುಡಿದು ಅಪೌರುಷೇಯಗಳಾದ ಶೃತಿಗಳ ಬಗ್ಗೆ  ತನಗಿರುವ ಗೌರವವನ್ನು ಪ್ರಕಟಿಸಿರುವನು.

ಸ್ಮೃತಿ – ಪುರಾಣ – ತಂತ್ರ – ಪೂರ್ವಮೀಮಾಂಸ – ಉತ್ತರಮೀಮಾಂಸಾದಿ ಶಾಸ್ತ್ರಗಳು, ಈ ವೇದವಾಙ್ಮಯದ ಸುಲಭ ವಿವರಣೆಗಳು. ಇವುಗಳಿಗೆ ವ್ಯಾಖ್ಯಾನಗಳು ಅನೇಕ ಆಚಾರ್ಯರಿಂದ ರಚಿತಗಳಾದ ಭಾಷ್ಯ – ಟೀಕಾ–ಟಿಪ್ಪಣಿಗಳು. ವೈದಿಕ ಲೌಕಿಕ ಸಂಸ್ಕೃತ ಭಾಷೆಯಿಂದ ಕೂಡಿದ ಭಾರತೀಯರ ಆಧ್ಯಾತ್ಮಿಕ ವಾಙ್ಮಯವನ್ನು ಸಾಮಾನ್ಯವಾಗಿ ಮೂರು ವಿಧದಲ್ಲಿ ವಿಂಗಡಿಸಬಹುದು.

1. **ವೇದ ವಾಙ್ಮಯ**
2. **ವ್ಯಾಸ ವಾಙ್ಮಯ**
3. **ದಾಸ ವಾಙ್ಮಯ**

ವೈದಿಕಸಂಸ್ಕೃತಭಾಷೆಯಲ್ಲಿರುವ ಅಪೌರುಷಯವೆಂದು ಪ್ರಸಿದ್ಧವಾದ ಶೃತಿಯು ವೇದವಾಙ್ಮಯವಾಗಿದೆ.

**"ಗೌತಮಸ್ಯ ಋಷೇಶ್ಶಾಪಾತ್ ಜ್ಞಾನೇತ್ವಜ್ಞಾನತಾಂಗತೇ**
**ಸಂಕೀರ್ಣ ಬುದ್ಧಯೋ ದೇವಾದ್ರ ಬ್ರಹ್ಮರು ಪುರಸ್ಸರಾಃ**
**ಶರಣ್ಯಂ ಶರಣಂ ಜಗ್ಮುಃ ನಾರಾಯಣಮನಾಮಯಂ**
**ತೈರ್ವಿಜ್ಞಾಪಿತ ಕಾರ್ಯಸ್ತು ಭಗವಾನ್ಪುರುಷೋತ್ತಮಃ**
**ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್**

ಎಂಬ ಸ್ಕಾಂದ ಪುರಾಣದ ವಚನದಂತೆ ಶ್ರೀಮನ್ನಾರಾಯಣನೇ ವೇದವ್ಯಾಸ ರೂಪದಿಂದ ಅವತರಿಸಿ ವೇದಗಳನ್ನು ವಿಭಾಗಿಸಿದನು. ವೇದಾರ್ಥನಿರ್ಣಾಯಕಗಳಾದ ಹದಿನೆಂಟು ಪುರಾಣಗಳನ್ನೂ, ಬ್ರಹ್ಮಸೂತ್ರಗಳನ್ನೂ, ಭಾರತಾದಿ ಇತಿಹಾಸಗ್ರಂಥಗಳನ್ನೂ ರಚಿಸಿದನು. ಇವೆಲ್ಲವೂ ವ್ಯಾಸವಾಙ್ಮಯಗಳು (ವ್ಯಾಸಸಾಹಿತ್ಯ).

ವೈದಿಕಮತಾಚಾರ್ಯರೆಲ್ಲರೂ ಭಕ್ತಿತತ್ತ್ವವನ್ನು ಅಂಗೀಕರಿಸಿದವರು. ಇದರಿಂದಾಗಿ ಪರಬ್ರಹ್ಮನಿಗೆ ಈಶತ್ವವನ್ನೂ, ಜೀವನಿಗೆ ದಾಸತ್ತ್ವವನ್ನೂ ಯಾವುದೋ ಒಂದು ಸ್ಥಿತಿಯಲ್ಲಿ ಅಂಗೀಕರಿಸಲೇ ಬೇಕಾಗುವುದು. ಭಕ್ತಿಯ ಭಾವದಿಂದ ಬಾಗಿ, ದಾಸತ್ವವನ್ನಂಗೀಕರಿಸಿದ ಎಲ್ಲ ಆಚಾರ್ಯರ, ಋಷಿಗಳ, ಜ್ಞಾನಿಗಳ ವಾಙ್ಮಯಗಳೆಲ್ಲವೂ ದಾಸ ವಾಙ್ಮಯಗಳು. (ದಾಸಾಹಿತ್ಯ) ಪ್ರಧಾನವಾಗಿ ಸರ್ವತ್ರ ಸರ್ವದಾ ಜೀವೇಶರ ಮಧ್ಯದಲ್ಲಿ ದಾಸ – ಈಶ ಭಾವವನ್ನು ಪೂರ್ಣವಾಗಿ ಪ್ರತಿಪಾದಿಸಿದ ಆಚಾರ್ಯಮಧ್ವರ ಹಾಗೂ ಅದರ ಅನುಯಾಯಿಗಳ ಗ್ರಂಥಗಳೆಲ್ಲವೂ ದಾಸವಾಙ್ಮಯದಲ್ಲಿ ಸೇರುವವು.

ವೇದಗಳ ನಿಜಾರ್ಥವು ಸರಿಯಾಗಿ ತಿಳಿಯದಾಗಲು, ಪುರಾಣ – ಬ್ರಹ್ಮಸೂತ್ರಾದಿಗಳ ಪ್ರಾದುರ್ಭಾವ. ಇವುಗಳ ನಿಜಾರ್ಥವು ಸಹ ತಿಳಿಯದಾಗಲು, ಅನೇಕ ಆಚಾರ್ಯರ ವ್ಯಾಖ್ಯಾನ ಗ್ರಂಥಗಳು ಉದ್ಭವಿಸಿದವು. ಕಾಲಾಂತರದಲ್ಲಿ ಸಂಸ್ಕೃತಭಾಷೆಯು ಕೇವಲ ಪಂಡಿತ ವರ್ಗಕ್ಕೆ ಮಾತ್ರ ಮೀಸಲಾಯಿತು. ಸಂಸ್ಕೃತಭಾಷೆಯಿಂದ ವಂಚಿತರಾದ ಜನಸಾಮಾನ್ಯರಿಗೆ, ಆ ಭಾಷೆಯಲ್ಲಿ ರಚಿತವಾದ ಗ್ರಂಥಗಳೂ, ಅದರಲ್ಲಿ ನಿಕ್ಷಿಪ್ತವಾದ ಆಧ್ಯಾತ್ಮಿಕ ವಿಷಯಗಳೂ ಗಗನ ಕುಸುಮಗಳಾದವು. ಇದರಿಂದಾಗಿ ಆತ್ಮೋನ್ನತಿಗೆ ಕಾರಣವಾದ ಪರವಿದ್ಯೆಯಿಂದ ಜನರು ದೂರವಾದರು. ಈ ಸಂಕಷ್ಟ ಪರಿಸ್ಥಿತಿಯಲ್ಲಿ ಜ್ಞಾನಿಗಳು ಆ ಪ್ರಾಂತಗಳಲ್ಲಿ ಅವತರಿಸಿ, ಆ ಆಡು ಭಾಷೆಗಳಲ್ಲಿ ಕೃತಿಗಳನ್ನು ರಚಿಸಿ, ವೇದಾಂತ ವಿಜ್ಞಾನವನ್ನು ಹಂಚಿಕೊಟ್ಟರು. ಈ ಹಿನ್ನೆಲೆಯಲ್ಲಿ ಹೊರಹೊಮ್ಮಿದ ಸಾಹಿತ್ಯವೇ ಕರ್ನಾಟಕ ಹರಿದಾಸಸಾಹಿತ್ಯ. ಈ ಕರ್ನಾಟಕ ಹರಿದಾಸ ಸಾಹಿತ್ಯವು ಆಚಾರ್ಯ ಮಧ್ವರ ಭಾವನಾ ತರಂಗಗಳನ್ನೇ ಹೊತ್ತು ಹೊರಹೊಮ್ಮಿದೆ. ಜನಸಾಮಾನ್ಯರ ಜಾಗೃತಿಗಾಗಿ ಬೆಳೆದುನಿಂತ ಕರ್ನಾಟಕ ಹರಿದಾಸ ಸಾಹಿತ್ಯವು, ಪದ – ಪದ್ಯ – ಉಗಾಭೋಗ – ಸುಳಾದಿ – ವೃತ್ತನಾಮ ಲಘುಕಾವ್ಯ – ಮಹಾಕಾವ್ಯಗಳ ರೂಪದಲ್ಲಿ ವ್ಯಾಪಕವಾಗಿದೆ.

ದ್ವೈತಸಿದ್ಧಾಂತ ಪ್ರತಿಷ್ಠಾಪನಾಚಾರ್ಯರೆಂದು ಪ್ರಸಿದ್ಧರಾದ ಆಚಾರ್ಯಮಧ್ವರ ನಂತರದಲ್ಲಿಯೇ ಈ ಕರ್ನಾಟಕಹರಿದಾಸಸಾಹಿತ್ಯವು ಕಾಣಿಸಿಕೊಂಡಿತು. ಆಚಾರ್ಯ ಮಧ್ವರೇ ಈ ಸಾಹಿತ್ಯದ ಸ್ಫೂರ್ತಿಮೂರ್ತಿಗಳು. ಆಚಾರ್ಯರ ದ್ವಾದಶಸ್ತೋತ್ರಗಳು ಲಯಬದ್ಧವಾಗಿವೆ. ಸ್ವತಃ ಆಚಾರ್ಯರು ತುಳು ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿದ್ದರೆಂಬ ಹೇಳಿಕೆಯೂ ಇದೆ. ಲಯಬದ್ಧವಿರುವ ಸಾಹಿತ್ಯದ ದೃಷ್ಟಿಯಲ್ಲಿ ಕನ್ನಡ ಕೀರ್ತನೆಗಳ ರಚನೆಗೆ ಶ್ರೀಕಾರ ಹಾಕಿದವರು ಶ್ರೀ ನರಹರಿತೀರ್ಥರು. ನಂತರ ಈ ಹೆದ್ದಾರಿಯಲ್ಲಿ ಶ್ರೀ ಶ್ರೀಪಾದರಾಜರು, ಶ್ರೀ ವ್ಯಾಸರಾಜರು, ಶ್ರೀವಾದಿರಾಜರು, ಶ್ರೀ ಪುರಂದರದಾಸರು, ಶ್ರೀ ಕನಕದಾಸರು, ಶ್ರೀ ಮಹಿಪತಿದಾಸರು, ಶ್ರೀ ಪ್ರಸನ್ನವೇಂಕಟದಾಸರು, ಶ್ರೀ ವಿಜಯದಾಸರೇ ಮೊದಲಾದ ಮಹಿತಾತ್ಮರು ಮುನ್ನಡೆದರು. ಇಲ್ಲಿಯವರೆಗೆ ಆಗಿಹೋದ ಹರಿದಾಸರ ಸಂಖ್ಯೆ 350ಕ್ಕೂ ಮೇಲ್ಪಟ್ಟಿದೆ.

ದೇಶದ ಎಲ್ಲಾ ಪ್ರಾಂತಗಳಲ್ಲಿ ಸಾಧುಗಳು, ಸಂತರು, ಹರಿದಾಸರು, ವಾಗ್ಗೇಯಕಾರರು ಅವತರಿಸಿ, ತಮ್ಮ ತಮ್ಮ ಪ್ರಾಂತೀಯ ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿರುವರು. ಎಲ್ಲರೂ



ತಮ್ಮ ಭಕ್ತಿಯ ಪಾಶದಿಂದ  ಭಗವಂತನನ್ನು ಬಿಗಿದು ಕಟ್ಟಿದವರೇ. ಜ್ಞಾನ ವೈರಾಗ್ಯಗಳಿಗೆ ಪ್ರತಿನಿಧಿಗಳೇ. ವಿಚಿತ್ರವೆಂದರೆ ತಮಿಳುನಾಡಿನ ಆಳ್ವಾರರ ಪರಂಪರೆಯಾಗಲಿ, ಕರ್ನಾಟಕದ ಶಿವಶರಣರ ಪರಂಪರೆಯಾಗಲಿ, ತೆಲುಗು ದೇಶದ ಅನ್ನಮಾಚಾರ್ಯ, ತ್ಯಾಗರಾಜ, ರಾಮದಾಸರೇ ಮೊದಲಾದ ವಾಗ್ಗೇಯಕಾರರ ಪರಂಪರೆಯಾಗಲೀ, ಉತ್ತರ ದೇಶದ ಸಂತರ ಪರಂಪರೆಯಾಗಲಿ ಇಂದಿನವರೆಗೂ ನಡೆದು ಬಂದಿಲ್ಲ. ಉದಾಹರಣೆಗೆ ಪದಕವಿತಾ ಪಿತಾಮಹರೆಂದು ಪ್ರಸಿದ್ಧರಾದ ಅನ್ನಮಾಚಾರ್ಯರ ಪರಂಪರೆ ಅವರ ಮೊಮ್ಮಗನವರೆಗೆ ಮಾತ್ರ ಮುಂದುವರೆಯಿತು. ಇದರಂತೆ ಎಲ್ಲಾ ಮಹಿತಾತ್ಮರ ಪರಂಪರೆಯೂ ಸಹ ಮೂರು, ಐದು ತಲೆಯವರಿಗೆ ಮಾತ್ರ ಮುಂದುವರೆದು ನಂತರದಲ್ಲಿ ಕಾಣದಾಯಿತು. ನರಹರಿ ತೀರ್ಥರಿಂದ ಪ್ರಾರಂಭವಾದ ಕರ್ನಾಟಕ ಹರಿದಾಸ ಪರಂಪರೆಯು ಮಾತ್ರ ಇಂದಿನವರೆಗೂ ಜೀವದ್ಗಂಗೆಯಾಗಿದೆ. ಈ ಪರಂಪರೆಗೆ ಒಂದು ವಿಶೀಷ್ಟವಾದ ಸಂಪ್ರದಾಯವೂ ಇದೆ. ಹರಿದಾಸರಿಗೆ ಇರಬೇಕಾದ ವೇಷಭೂಷಣದ ರೂಪಕಲ್ಪನೆಯನ್ನು ಶ್ರೀಪುರಂದರದಾಸರು ತಮ್ಮ ಕೃತಿಗಳಲ್ಲಿ ಸ್ಪಷ್ಟ ಕಲ್ಪನೆಯನ್ನು ಶ್ರೀ ಪುರಂದರದಾಸರು ತಮ್ಮ ಕೃತಿಗಳಲ್ಲಿ ಸ್ಪಷ್ಟ ಪಡಿಸಿರುವರು. ಹರಿದಾಸರ ವೇಷದಲ್ಲಿ ಮೊಟ್ಟಮೊದಲು ಸಮಾಜಕ್ಕೆ ದರ್ಶನ ನೀಡಿದವರು ಶ್ರೀ ಪುರಂದರದಾಸರು. "ಆದದ್ದೆಲ್ಲಾ ಒಳಿತೇ ಆಯಿತು" ಎನ್ನುವ ಕೃತಿಯಿಂದ ಶ್ರೀ ಪುರಂದರದಾಸರು, ಹರಿದಾಸನಾಗ ಬಯಸುವವನು ತಂಬೂರಿ ಮೀಟುತ್ತಾ, ತುಳಸೀಮಾಲೆಯನ್ನು ಕೊರಳಲ್ಲಿ ಧರಿಸಿ, ಗೋಪಾಳ ಪುಟ್ಟಿಯನ್ನು ಭುಜಕ್ಕೆ ಹಾಕಿಕೊಳ್ಳಬೇಕೆಂದು ಸೂಚಿಸಿರುವರು. ಇದರಂತೆ "ತಂಬೂರಿ ಮೀಟಿದವ" ಎನ್ನುವ ಉಗಾಭೋಗದಿಂದ ಹರಿದಾಸರು ಕಾಲಿಗೆ ಗಜ್ಜೆಕಟ್ಟಿ, ಕೈಯಲ್ಲಿ ತಾಳವನ್ನು ಹಿಡಿದಿರಬೇಕೆಂದು ವಿಧಿಸಿರುವರು. ಪಂಚಭೇದದಿಂದ ಒಪ್ಪುವ ಪ್ರಪಂಚಕ್ಕೆ, ಪ್ರಭುವಾದ ಪಂಚರೂಪಾತ್ಮಕನಾದ ಶ್ರೀ ಹರಿಯ ಪಾದಪದ್ಮಗಳನ್ನು, ತಮ್ಮ ಮನೋಮಂಚದಲ್ಲಿಟ್ಟು ಪೂಜಿಸುವ ಅಂತರ್ದೀಕ್ಷೆಯುಳ್ಳ ಎಲ್ಲಾ ಹರಿದಾಸರಿಗೆ ತಂಬೂರಿ, ತಾಳ, ತುಳಸೀಮಣಿ, ಗೆಜ್ಜೆ, ಗೋಪಾಳ ಬುಟ್ಟಿ ಇವು ಐದು ಬಾಹ್ಯದೀಕ್ಷೆಗಳು. ತಲೆಗೆ ಕಾವಿವಸ್ತ್ರವನ್ನು ಸುತ್ತುವ ವಿಷಯದಲ್ಲಿ ದಾಸರವಚನವು ದೊರೆಯದೇ ಇದ್ದರೂ, ಈ ವ್ಯವಸ್ಥೆ ಅನಾದಿಯಿಂದ ಪ್ರಾಪ್ತವಾಗಿದೆ. ಕಾವೀವಸ್ತ್ರವು ವೈರಾಗ್ಯಕ್ಕೆ ಪ್ರತಿನಿಧಿ. ಹರಿದಾಸರೆಲ್ಲರೂ ಗೃಹಸ್ಥಾಶ್ರಮಿಗಳೆ. ತಾವು ಗೃಹಸ್ಥಾಶ್ರಮಿಗಳಾದರೂ, ತಮ್ಮ ಮತಿ ವೈರಾಗ್ಯಪೂರ್ಣವಾಗಿದೆ ಎಂದು ಸೂಚಿಸುವುದಕ್ಕಾಗಿಯೇ ಈ ಕಾವೀವಸ್ತ್ರದ ಧಾರಣೆ. ಇಂತಹ ಬಾಹ್ಯದೀಕ್ಷೆ ಯಾವ ಪರಂಪರೆಯಲ್ಲೂ ಇಲ್ಲ. ಈ ದೀಕ್ಷಾಸ್ವೀಕಾರವು ಸಹ ಗುರುಗಳಿಂದಲೇ ಆಗಬೇಕು. ದಾಸ ದೀಕ್ಷೆಯನ್ನಿತ್ತ ಗುರುಗಳು, ಅಂಕಿತ ನಾಮವನ್ನು ಸಹ ಕರುಣಿಸುವರು. ಮುಂದೆ ಈ ಅಂಕಿತನಾಮದಿಂದಲೇ ಕೃತಿಗಳ ರಚನೆ ಪ್ರಾರಂಭವಾಗುವುದು. ವ್ಯಾಸರಾಯರು ಪುರಂದರದಾಸರಿಗೆ ಗುರುಗಳು. ವ್ಯಾಸರು ದಾಸರಿಗೆ ದಾಸ ದೀಕ್ಷೆಯನ್ನು ಕೊಟ್ಟು ಅನುಗ್ರಹಿಸಿದರು. ಅಂದಿನವರೆಗೂ ಶ್ರೀನಿವಾಸನಾಯಕರೆಂದು ಪ್ರಸಿದ್ಧರಾದ ದಾಸರು, ಅಂಕಿತನಾಮ ಹೊಂದಿದ ನಂತರ ಪುರಂದರದಾಸರೆಂದು ಪ್ರಸಿದ್ಧರಾದರು. ಈ ಕರ್ನಾಟಕ ಹರಿದಾಸರ ಪರಂಪರೆಯಲ್ಲಿ ವ್ಯಾಸರಾಯರು ಶ್ರೀವಾದಿರಾಜರು, ಶ್ರೀ ಪ್ರಸನ್ನವೇಂಕಟದಾಸರು ಇವರೇ ಮೊದಲಾದ ಕೆಲ ಹರಿದಾಸರಿಗೆ, ಸಾಕ್ಷಾತ್ ಭಗವಂತನಿಂದಲೇ ದಾಸದೀಕ್ಷೆ

ಅಂಕಿತನಾಮಗಳು ದೊರೆತರೆ, ಶ್ರೀ ವಿಜಯದಾಸರೇ ಮೊದಲಾದ ಕೆಲವರಿಗೆ ಇವು ಸ್ವಪ್ನದಲ್ಲಿ ಗುರುಗಳಿಂದ ಸಂಪ್ರಾಪ್ತವಾಗಿವೆ. ಒಟ್ಟಾರೆ ಈ ಅಪೂರ್ವವಾದ ಸಂಪ್ರದಾಯ, ಹರಿದಾಸ ಪರಂಪರೆಗೆ ಮೀಸಲಾಗಿದ್ದು, ಬಹಳ ಹಿಂದಿನ ಕಾಲದಿಂದಲೂ ನಡೆದು ಕೊಂಡು ಬಂದಿದೆ.

ಇನ್ನು ದಾಸಸಾಹಿತ್ಯದ ವೈಶಿಷ್ಟ್ಯದ ಬಗ್ಗೆ ಕೇಳಬೇಕಾದಲ್ಲಿ ಇದೊಂದು ಅಪೂರ್ವ ಸಾಹಿತ್ಯ. ಗಹನವಾದ ವೇದಗಳ ನಿಜಾರ್ಥವನ್ನು ವಿವರಿಸಲು ಹೊರಹೊರಟ ವ್ಯಾಸಸಾಹಿತ್ಯ ಹಾಗೂ ಸಂಸ್ಕೃತ ದಾಸಸಾಹಿತ್ಯಗಳ ಮಾರ್ಗದಲ್ಲಿ ಮುನ್ನಡೆದ ಏಕೈಕ ಸಾಹಿತ್ಯವಾಗಿದೆ. ಶ್ರುತಿ, ಸ್ಮೃತಿ ಪುರಾಣ, ತಂತ್ರಶಾಸ್ತ್ರ, ವೇದಾಂತ ಗ್ರಂಥಗಳಲ್ಲಡಕವಾದ ಅಪೂರ್ವಾರ್ಥಗಳನ್ನು, ಜನಸಾಮಾನ್ಯಕ್ಕೆ ಸುಲಲಿತವಾದ ಕನ್ನಡ ಭಾಷೆಯಲ್ಲಿ ದೊರೆಯುವಂತೆ ಮಾಡಿದ ಘನತೆ, ಈ ಕನ್ನಡ ಹರಿದಾಸ ಸಾಹಿತ್ಯಕ್ಕೆ ಮೀಸಲಾದುದು.

ಚಕ್ರಾಬ್ಜಮಂಡಲ, ಭದ್ರಿಕಾಮಂಡಲ, ದೇವಪೂಜಾಪದ್ಧತಿ ಇವು ತಂತ್ರಶಾಸ್ತ್ರಗಳಲ್ಲಿ ಬರುವ ಗಹನವಾದ ವಿಷಯಗಳು. ಸಾಮಾನ್ಯವಾಗಿ ಪಂಡಿತರಿಗೂ ನಿಲುಕದ ವಿಷಯಗಳು. ಇಂಥಾ ಜಟಿಲವಾದ ಅಪೂರ್ವ ವಿಷಯಗಳನ್ನು ಹರಿದಾಸರು ಸುಂದರವಾಗಿ, ಸುಲಭವಾಗಿ, ಲಯಬದ್ಧವಾಗಿ ಹಾಡಿ ವಿವರಿಸಿರವರು. ಇಂದಿಗೂ ಕನ್ನಡ ನಾಡಿನಲ್ಲಿ ಅನೇಕ ಮಹಿಳೆಯರು ತಮ್ಮ ತಮ್ಮ ಮನೆಗಳಲ್ಲಿ ಚಕ್ರಾಬ್ಜಮಂಡಲವನ್ನು ರಂಗವಲ್ಲಿ ರೂಪದಲ್ಲಿ ಚಿತ್ರಿಸುವರು. ಈ ವಿಷಯದಲ್ಲಿ ಹರಿದಾಸರ ಉಪಕಾರ ಚಿರಸ್ಮರಣೀಯ. ಶ್ರೀ ಬನ್ನಂಜೆ ಗೋವಿಂದಾಚಾರ್ಯರು ತಮ್ಮ ಅನುವಾದದಿಂದ ಕೂಡಿದ ತಂತ್ರಸಾರ ಸಂಗ್ರಹದ ಪರಿಶಿಷ್ಟದಲ್ಲಿ, ಚಕ್ರಾಬ್ಜಮಂಡಲವನ್ನು ಕುರಿತು ವಿವರಿಸುತ್ತಾ, ಶ್ರೀ ವಿಜಯದಾಸರ ಉಪಕಾರವನ್ನು ಕುರಿತು ಸ್ಮರಿಸಿರುವರು. ಹರಿದಾಸರ ಉಪಕಾರ ಈ ಚಕ್ರಾಬ್ಜಾದಿಮಂಡಲಗಳನ್ನು ಕೃತಿಗಳ ರೂಪದಲ್ಲಿ ವಿವರಿಸುವದರೊಟ್ಟಿಗೆ ಮುಗಿಯಲಿಲ್ಲ. ಜನಸಾಮಾನ್ಯರಿಗೆ ಈ ಮಂಡಲಗಳ ಪರಿಚಯವನ್ನು ಇನ್ನೂ ಸುಲಭರೀತಿಯಲ್ಲಿ ಮಾಡಿಕೊಡಲು ಬೃಹದಾಕಾರದ ಚಿತ್ರಗಳನ್ನು ಸಹ ಬರೆದಿರುವರು. ಈ ಮಹತ್ಕಾರ್ಯವನ್ನು ಮೊಟ್ಟಮೊದಲು ಮಾಡಿದವರು ಶ್ರೀ ಗೋಪಾಲದಾಸರು. ವಿಜಯದಾಸಾದಿ ಪ್ರಾಚೀನ ಹರಿದಾಸರು ಬರೆದ ಚಿತ್ರಪಟಗಳು ನಮಗೆ ದೊರೆತಿಲ್ಲ. ಗೋಪಾಲದಾಸರ ನಂತರದಲ್ಲಿ ಜಗನ್ನಾಥದಾಸರೇ ಮೊದಲಾದ ಅನೇಕದಾಸರು, ಗಹನವಾದ ಅನೇಕ ವಿಷಯಗಳನ್ನು ಜನರಿಗೆ ಚಿತ್ರಗಳ ದ್ವಾರ ತಿಳಿಯ ಹೇಳಲು ಪ್ರಯತ್ನಿಸಿರುವರು.

ಉಪನಿಷತ್ತುಗಳ ಹಾಗೂ ಪುರಾಣಗಳ ರಹಸ್ಯಗಳನ್ನು ತಿಳಿಯ ಹೇಳುವಲ್ಲಿ ಹರಿದಾಸರ ಪ್ರಯತ್ನ ಪೂರ್ಣ ಫಲಕಾರಿಯಾಗಿದೆ. ಒಂದು ದೃಷ್ಟಿಯಲ್ಲಿ ಹರಿದಾಸರ ಕೃತಿಗಳು ಉಪನಿಷತ್ತಿನ ಭಾಷಾಂತರಗಳು ಎಂದಲ್ಲಿ ತಪ್ಪಾಗಲಾರದು. ಹರಿದಾಸರು ತಮ್ಮ ಕೆಲ ಕೃತಿಗಳಲ್ಲಿ ಒಂದು ಉಪನಿಷತ್ತನ್ನೋ ಅಥವಾ ಉಪಷತ್ತಿನ ಒಂದು ಭಾಗವನ್ನೋ ಪೂರ್ಣವಾಗಿ ಅನುವಾದಿಸಿರುವುದನ್ನು ಕಾಣಬಹುದು. "ದ್ವಾಸುಪರ್ಣಸಯುಜಾಸಖಾ" ಎನ್ನುವ ಕೃತಿಯನ್ನು ಪರುಂದರದಾಸರು "ಜಯವದೆ ಜಯವದೆ ಈ ಮನೆತನಕೆ – ಬಿಡು ಬಿಡು ಬಿಡು ಬಿಡು ಮನ ಸಂಶಯವ" ಎನ್ನುವ ಹಾಡಿನಲ್ಲಿ ಪೂರ್ಣವಾಗಿ ಅನುವಾದಿಸಿರುವರು. ಜಾನಪದ



ಶೈಲಿಯಲ್ಲಿರುವ ಈ ಹಾಡು 'ಬುಡು ಬುಡಿಕೆ ಹಾಡು' ಎಂದು ಪ್ರಸಿದ್ಧವಾಗಿದೆ. ಈ ಕಾರಣದಿಂದಲೇ ಪುರಂದರದಾಸರ ಸಮಗ್ರಕೃತಿಗಳು ಪುರಂದರೋಪನಿಷತ್ತೆಂದೇ ಪ್ರಸಿದ್ಧವಾಗಿವೆ. ಶ್ರೀ ವಿಜಯದಾಸರ ಸಮಗ್ರಸುಳಾದಿಗಳು ಪೂರ್ಣಉಪನಿಷದರ್ಥಗಳಿಂದಲೇ ಕೂಡಿವೆ. ಕೆಲಹರಿದಾಸರು ಪ್ರಸಿದ್ಧಪುರಾಣಗಳಲ್ಲಿರುವ ಅಪೂರ್ವಭಾಗಗಳನ್ನು ಗೇಯರೂಪಗಳಲ್ಲಿ ಹಾಡಿ ಶ್ರೀಸಾಮಾನ್ಯರಿಗೆ ನೀಡಿರುವರು. ಭಾಗವತದಶಮಸ್ಕಂಧದ ಕ್ರಿಷ್ಣನ ಕಥೆ, ಸುಧಾಮಚರಿತ್ರೆ, ಸುಭದ್ರಾ ಪರಿಣಯ, ನಲೋಪಾಖ್ಯಾನ, ಗಜೇಂದ್ರಮೋಕ್ಷ, ಪ್ರಹ್ಲಾದಚರಿತ್ರೆ, ಶಕುಂತಲೋಪಾಖ್ಯಾನಗಳಂಥಾ ಅನೇಕಖಂಡಕಾವ್ಯಗಳು ಅತ್ಯಂತ ಪ್ರಸಿದ್ಧವಾದವುಗಳು. ಈ ಮಹತ್ಕಾರ್ಯಕ್ಕೆ ಮೊಟ್ಟಮೊದಲು ಶ್ರೀಕಾರಹಾಕಿದವರು ಕನಕದಾಸರಾದರೆ, ಎರಡನೆಯ ವ್ಯಕ್ತಿ ಪ್ರಸನ್ನವೇಂಕಟದಾಸರು.

ಪ್ರತಿಮಾನವನೂ ತನ್ನನ್ನು ಹಾಗೂ ಬಾಹ್ಯಪ್ರಪಂಚವನ್ನು ಎರಡು ಸಂದರ್ಭಗಳಲ್ಲಿ ಮರೆಯುತ್ತಾನೆ. ಮೊದಲನೆಯ ವಿಸ್ಮೃತಿ ಆಧ್ಯಾತ್ಮಿಕಪ್ರಪಂಚದಲ್ಲಿ. ಎರಡನೆಯ ವಿಸ್ಮೃತಿ ಲೌಕಿಕಪ್ರಪಂಚದಲ್ಲಿ. ಜ್ಞಾನ – ಭಕ್ತಿ – ವೈರಾಗ್ಯಗಳಿಂದ ಪೂರ್ಣನಾದ ಜೀವಿಯು ಆ ಭಗವಂತನ ಒಲುಮೆಯಿಂದ, ಹೃದಯಾಂತರ್ಯಾಮಿಯಾದ ತನ್ನ ಬಿಂಬನ ದರ್ಶನವನ್ನು ಪಡೆಯುವನು. ಇದೇ ಅಪರೋಕ್ಷ. ನಿರತಿಶಯಾನಂದದಾಯಕವಾದ ಆ ಸುಸಮಯದಲ್ಲಿ ಪ್ರತಿಜೀವಿಯೂ ತನ್ನನ್ನು, ತನ್ನ ಸರ್ವಸ್ವವನ್ನೂ ಮರೆಯುವನು. ಇದರಂತೆ ದೈಹಿಕಾನಂದವನ್ನುಣಿಸುವ ಲೈಂಗಿಕಪ್ರಕ್ರಿಯೆಯಲ್ಲೂ, ಎಲ್ಲರೂ ಎಲ್ಲವನ್ನು ಮರೆಯುವರು. ಮೊದಲನೆಯದು ಶಾಶ್ವತಾನಂದ; ಎರಡನೆಯದು ಕ್ಷಣಿಕಾನಂದ. ಒಂದು ಬಂಧಮೋಚಕ ಮತ್ತೊಂದು ಬಂಧಕ. ಬಂಧಕವೆಂದ ಮಾತ್ರದಲ್ಲಿ ಎರಡನೆಯದನ್ನು ಯಾರೂ ಬಿಡುವಂತಿಲ್ಲ. ಆಶ್ರಮಗಳಲ್ಲಿ ಗೃಹಸ್ಥಾಶ್ರಮ ಅತ್ಯಂತ ಶ್ರೇಷ್ಠವಾದುದು. ಪ್ರಜೋತ್ಪತ್ತಿ ಅತ್ಯಾವಶ್ಯಕ. "ಇರಬೇಕು ಇದ್ದು ಜೈಸಬೇಕು". ಬಂಧಕವು ಬಂಧಮೋಚಕವಾಗಬೇಕು; ಪ್ರಾಣಾಂತಕವಾದ ವಿಷ ಪ್ರಾಣ ರಕ್ಷಣೆಗೆ ಉಪಕರಿಸುವಂತೆ. ವಿಶ್ವದ ಯಾವ ಸಾಹಿತ್ಯದಲ್ಲೂ ಇದಕ್ಕೆ ಬೇಕಾಗುವ ಉಪಾಯವನ್ನು ಸೂಚಿಸಿಲ್ಲ. ಅಂಧಕಾರಬಂಧುರವಾದ ಈ ಮಾರ್ಗದಲ್ಲಿ ಪ್ರಯಾಣಿಸುವ ಪ್ರತಿ ಜೀವಿಗೂ, ಕೇವಲ ವೈದಿಕಸಾಹಿತ್ಯವು ಮಾತ್ರ ಜ್ವಲಂತ ಕೈದೀಪವಾಗಿದೆ. ಬೃಹದಾರಣ್ಯ – ಛಾಂದೋಗ್ಯಗಳಲ್ಲಿ ಇದರ ಪ್ರಸ್ತಾಪವಿದೆ.

ಅನಿರುದ್ಧಶರೀರದಿಂದ ಯುಕ್ತನಾದ ಜೀವಿಯನ್ನು ಭಗವಂತನು ಆದಿಯಲ್ಲಿ ಆಕಾಶದಲ್ಲಿರುಸುತ್ತಾನೆ. ನಂತರದಲ್ಲಿ ಮೇಘಮಂಡಲದಲ್ಲಿರಿಸಿ, ವೃಷ್ಟಿದ್ವಾರಾ ಭೂಮಿಯಲ್ಲಿ ಬೆಳೆಯುವ 'ಧಾನ್ಯಾದಿಗಳಲ್ಲಿಡುವನು. ಪುನಃ ಅಲ್ಲಿಂದ ಪುರುಷನ ತೇಜೋಮಯವಾದ ರೇತಸ್ಸಿನಲ್ಲಿ ಕೆಲವು ಕಾಲವಿಟ್ಟು, ಆ ಪುರುಷರೇತೋದ್ವಾರಾ ಸ್ತ್ರೀ ಗರ್ಭದಲ್ಲಿಡುವನು. ಜನಿಸುವ ಆ ಜೀವಿಗೆ ಮಾತೃಗರ್ಭದಲ್ಲಿ ಶ್ರೀಹರಿಯು ಅನಿರುದ್ಧಾದಿಪಂಚರೂಪಗಳಿಂದ ಸ್ಥೂಲಶರೀರವನ್ನು ಕರುಣಿಸುವನು. ಇಲ್ಲಿ ಗಗನ, ಮೇಘ, ಭೂಮಿ, ಪುರುಷ, ಸ್ತ್ರೀ ಇವೇ ಐದು ಅಗ್ನಿಗಳು. ಈ ಐದು ಅಗ್ನಿಗಳಲ್ಲಿ ಮರೆಯದೆ ಜೀವಿಯನ್ನು ದೇವತೆಗಳು ಶ್ರೀ ಹರಿಯಲ್ಲಿ ಹೋಮಿಸುವರು, ಎಂದು ತಿಳಿಯುವ ಕ್ರಮಕ್ಕೆ 'ಪಂಚಮಹಾಯಜ್ಞ"ವೆಂದು ಹೆಸರು.

ಲೌಕಿಕಸುಖಾನುಭವದಲ್ಲಿ ಪರಮೋತ್ತಮವಾದ ಆಧ್ಯಾತ್ಮಿಕಸುಖಾನುಭವದ ತಿರುಳನ್ನು ತಿಳಿಸಿ ಕೊಟ್ಟ ಉಪನಿಷತ್ತುಗಳು, ಲೈಂಗಿಕವ್ಯಾಪಾರವನ್ನು ಯಜ್ಞವನ್ನಾಗಿಸಿವೆ. ಈ ಅನುಸಂಧಾನದಿಂದ ಉತ್ತಮ ಪ್ರಜೋತ್ಪತ್ತಿ ಹಾಗೂ ಭಗವದನುಗ್ರಹ ಪ್ರಾಪ್ತಿ ಆಗುವವು ಇದೆ. "ಕಾಯಕವೇ ಕೈಲಾಸ" ಎನ್ನುವ ನಾಣ್ಣುಡಿಗೆ ನಿರ್ವಚನ. ಈ ಅಪೂರ್ವವಾದ ಉಪನಿದ್ರಹಸ್ಯವನ್ನು ಕರ್ನಾಟಕ ಹರಿದಾಸರು ಕನ್ನಡೀಕರಿಸಿ ಸಮಾಜಕ್ಕೆ ಬಹದುಪಕಾರವನ್ನು ಮಾಡಿರುವರು. ಈ ಸಾಹಿತ್ಯವನ್ನುಳಿದು ಉಳಿದ ಯಾವ ಸಾಹಿತ್ಯದಲ್ಲೂ ಈ ಅಪೂರ್ವ ವಿವರಣೆಯ ಘಟ್ಟವನ್ನು ಕಾಣಲಾರೆವು. ಇದು ಹರಿದಾಸಸಾಹಿತ್ಯದ ವೈಶಿಷ್ಯ.

"ಬಹುಚಿತ್ರಜಗದ್ಬಹುಧಾಕರಣಾತ್ ಪರಶಕ್ತಿರನಂತಗುಣಃಪರಮಃ" ಇದು ಆಚಾರ್ಯಮಧ್ವರ ಅಮೃತವಾಣಿ. ಚಿತ್ರವಿಚಿತ್ರವಾದ ರೀತಿಯಲ್ಲಿ ಅನಂತವಾಗಿ ಸೃಜಿಸಲ್ಪಟ್ಟ ಈ ವಿಶ್ವದ ಅರಿವು ಅತ್ಯಾವಶ್ಯಕ. ಇದರಿಂದ ಭಗವಂತನ ಶಕ್ತಿಸಾಮರ್ಥ್ಯಗಳ ತಿಳುವಳಿಕೆಯುಂಟಾಗಿ, ಗುಣನಿಧಿಯಾದ ಅವನ ಸರ್ವೋತ್ತಮತ್ತವು ತಿಳಿದು ಬರುವುದು. ಈ ಚರಾಚರಾತ್ಮಕವಾದ ಅನಂತವಿಶ್ವದ ಸೃಷ್ಟಿಕರ್ತನು ಶ್ರೀಹರಿ. ಅತ ಏವ ವೇದಗಳಲ್ಲಿ, ಪುರಾಣಗಳಲ್ಲಿ ವಿಸ್ತೃತವಾಗಿ ಸೃಷ್ಟಿಯ ರಹಸ್ಯವು ವಿವರಿಸಲ್ಪಟ್ಟಿದೆ. ಪುರಾಣಲಕ್ಷಣದಲ್ಲಿ ಸೃಷ್ಟಿಕ್ರಮದ ವರ್ಣನೆಯು ಪ್ರಥಮಸ್ಥಾನವನ್ನು ಆಕ್ರಮಿಸಿ ನಿಂತಿದೆ.

ವೇದವ್ಯಾಸರು ಸೃಷ್ಟಿಕ್ರಮವನ್ನು ಸಮಗ್ರವಾಗಿ ಒಂದೇ ಪುರಾಣದಲ್ಲಿ ಹೇಳದೆ, ಒಂದೊಂದು ಪುರಾಣದಲ್ಲಿ ಒಂದೊಂದು ಭಾಗವನ್ನು ವಿವರಿಸಿರುವರು. ಇದೆಲ್ಲವನ್ನೂ ಒಂದೆಡೆಗೆ ಸೇರಿಸಿದಾಗ ಮಾತ್ರ ಸಂಪೂರ್ಣ ಸೃಷ್ಟಿಪ್ರಕರಣವು ಸಿದ್ಧವಾಗುವುದು. ಈ ಮಹತ್ಕಾರ್ಯವನ್ನು ಸಾಧಿಸಿದವರೆಂದರೆ ಕರ್ನಾಟಕಹರಿದಾಸರು. ಪಂಡಿತರಿಗೂ ಸಹ ಸೃಷ್ಟಿಪ್ರಕರಣವು ಕಬ್ಬಿಣದ ಕಡಲೆಯಾಗಿದೆ. ಹರಿದಾಸರು ಮಾತ್ರ ಈ ಕ್ಲಿಷ್ಟವಾದ ಪ್ರಕರಣವನ್ನು ಕನ್ನಡದಲ್ಲಿ, ಸುಲಭವಾಗಿ ಅರ್ಥವಾಗುವಂತೆ, ಸುಂದರವಾಗಿ ಪದಸುಳಾದಿಗಳ ರೂಪದಲ್ಲಿ ರಚಿಸಿ, ಸಮಾಜಕ್ಕೆ ಹಂಚಿಕೊಟ್ಟಿರುವರು. ವಿಶ್ವದ ಮಧ್ಯದಲ್ಲಿದ್ದು ಜೀವನವನ್ನು ನಡೆಸಿರುವ ಪ್ರತಿಜೀವಿಗೆ ಇದರ ಜ್ಞಾನ ಅತ್ಯಾವಶ್ಯಕ. ಇಂದಿನ ವಿಜ್ಞಾನಿಗಳ ಪ್ರಯತ್ನವೆಲ್ಲವೂ ಇದಕ್ಕಾಗಿಯೇ ನಡೆದಿದೆ. ಈ ಮಹಾತ್ಕಾರ್ಯವನ್ನು ಸಾವಿರಾರುವರ್ಷಗಳ ಹಿಂದೆಯೇ ತಮ್ಮ ಆತ್ಮಶಕ್ತಿಯಿಂದ ಸಾಧಿಸಿ, ಜಯಗಳಿಸಿದ ಕೀರ್ತಿ ಭಾರತೀಯ ಮಹರ್ಷಿಗಳಿಗೆ ಸೇರಿದ್ದು. ಇದನ್ನು ಸುಲಲಿತವಾಗಿ ಮಾಡಿ ಸಮಾಜಕ್ಕೆ ಒದಗಿಸಿಕೊಟ್ಟ ಘನತೆ, ಕರ್ನಾಟಕ ಹರಿದಾಸರಿಗೆ ಸೇರಿದೆ. ಇದು ಹರಿದಾಸ ಸಾಹಿತ್ಯದ ವೈಶಿಷ್ಟ.

ಮತ್ತೊಂದು ಹರಿದಾಸ ಸಾಹಿತ್ಯದ ವೈಶಿಷ್ಟ್ಯವೆಂದರೆ ಸಕಲ ತಾತ್ವಿಕದೇವತೆಗಳ ಪರಿಚಯ ಮಾಡಿಸಿಕೊಡುವಿಕೆ. ವೇದಗಳಲ್ಲಿ ವಿಷ್ಣು ರುದ್ರ, ಬ್ರಹ್ಮ, ಇಂದ್ರ, ವಾಯು, ಅಗ್ನಿ, ಸೂರ್ಯ, ಯಮ ಮೊದಲಾದ ಸಕಲತತ್ವಾಧಿಪತಿಗಳ ವರ್ಣನೆ ಇದೆ. ಅಲ್ಲಿ ಆಯಾ ದೇವತೆಗಳ ಸ್ಥಾನ–ಮಾನ–ವ್ಯಾಪಾರ–ವ್ಯಾಪ್ತಿಗಳು ವರ್ಣಿತವಾಗಿವೆ. ವೇದಗಳಿಗೆ ಸಂಬಂಧಿಸಿದ ಈ ದೇವತೆಗಳ ಅವತಾರ ಚರಿತ್ರೆಗಳು ಪುರಾಣಗಳಲ್ಲಿ ಪ್ರಸ್ತಾಪಿಸಲ್ಪಟಿವೆ. ಈ ರೀತಿ ಶ್ರುತಿಪುರಾಣಗಳಲ್ಲಿ ಕಾಣಿಸಿಕೊಳ್ಳುವ ಎಲ್ಲಾ ದೇವತೆಗಳ ಮಹಾಮಹಿಮೆಯನ್ನು ಹರಿದಾಸರು



ಹೃದಯಂಗಮವಾಗಿ ತಮ್ಮ ಕೃತಿಗಳಲ್ಲಿ ಹಾಡಿರುವರು. ವೈದಿಕಭೂಮಿ ಎನಿಸಿದ ಭಾರತದಲ್ಲಿ ಒಂದು ವಿಚಿತ್ರವಾದ ಸನ್ನಿವೇಶವನ್ನು ಕಾಣಬಹುದು. ಶೈವಸಾಹಿತ್ಯದಲ್ಲಿ ವೈಷ್ಣವದೇವತೆಗಳ ವರ್ಣನೆಯಾಗಲಿ, ಉಪಾಸನೆಯಾಗಲಿ ಕಂಡು ಬರುವುದಿಲ್ಲ. ಈ ಸಾಹಿತ್ಯದಲ್ಲಿ ವಿಷ್ಣು, ಲಕ್ಷ್ಮಿ, ವಾಯು, ಗರುಡ, ಶೇಷ ಮುಂತಾದ ದೇವತೆಗಳ ಉಪಾಸನೆಗೆ ಸ್ಥಾನವಿಲ್ಲ. ಇದನ್ನು ಸ್ಪಷ್ಟವಾಗಿ ವೀರಶೈವ ಸಾಹಿತ್ಯದಲ್ಲಿ ಕಾಣಬಹುದು. ಇದರಂತೆ ಶ್ರೀವೈಷ್ಣವಸಾಹಿತ್ಯದಲ್ಲಿ (ಆಳ್ವಾರರ ದಿವ್ಯಪ್ರಬಂಧಗಳಲ್ಲಿ), ಶೈವಸಂಬಂಧಿ ದೇವತೆಗಳಿಗೆ ಸ್ಥಾನಮಾನಗಳಿಲ್ಲ. ಇಲ್ಲಿ ರುದ್ರ, ಪಾರ್ವತಿ, ವಿನಾಯಕ ಮುಂತಾದ ದೇವತೆಗಳ ವರ್ಣನೆ ಕಂಡು ಬರುವುದಿಲ್ಲ. ಶ್ರೀ ವೈಷ್ಣವ ಸಂಪ್ರದಾಯದಲ್ಲಿ ಸಾಗಿಬಂದ ಪದಕವಿತಾಪಿತಾಮಹರೆಂದು ಆಂಧ್ರದಲ್ಲಿ ಪ್ರಸಿದ್ಧರಾದ ತಾಳ್ಳಪಾಕ ಅನ್ನಮಾಚಾರ್ಯರ ಕೃತಿಗಳಲ್ಲಿ ಈ ಪರಿಸ್ಥಿತಿಯನ್ನು ಕಾಣಬಹುದು. ಕರ್ನಾಟಕ ಹರಿದಾಸರು ಮಾತ್ರ ತಾವು ನಂಬಿದ ದಾರಿಯಲ್ಲಿ, ವೇದಪ್ರತಿಪಾದ್ಯರಾದ ಸಕಲಸಾತ್ವಿಕ – ತಾತ್ವಿಕದೇವತೆಗಳನ್ನು ಸ್ತುತಿಸಿರುವರು. ದ್ವೈತಮತಾವಲಂಬಿಗಳಾದ ಹರಿದಾಸರು ವಿಷ್ಣುವನ್ನು ಸರ್ವೋತ್ತಮನನ್ನಾಗಿ ಅಂಗೀಕರಿಸಿದರೂ, ಉಳಿದ ಎಲ್ಲಾ ದೇವತೆಗಳನ್ನು ತಾರತಮ್ಯದ ರೀತಿಯಲ್ಲಿ ಅನನ್ಯಸಾಮಾನ್ಯವಾಗಿ ಸ್ತುತಿಸಿರುವರು. ಶ್ರುತಿ–ಸ್ಮೃತಿ–ಪುರಾಣ ಪ್ರತಿಪಾದ್ಯರಾದ ದೇವತೆಗಳನ್ನು ಅದೇ ಪದ್ಧತಿಯಲ್ಲಿ ವರ್ಣಿಸುತ್ತಾ, ಆ ದೇವತೆಗಳ ಸ್ವರೂಪ – ಅಂಶ – ಆವೇಶ – ಅವತಾರಾದಿಗಳನ್ನೂ, ಅವರ ವ್ಯಾಪಾರ – ವ್ಯಾಪ್ತಿಗಳನ್ನೂ ಕುಲಂಕಷವಾಗಿ ವರ್ಣಿಸಿರುವರು. ಇದು ಹರಿದಾಸ ಸಾಹಿತ್ಯದ ವೈಶಿಷ್ಟ್ಯ.

ಪ್ರಸ್ತುತ ಹರಿದಾಸಸಾಹಿತ್ಯ ಶಬ್ದವು ಕರ್ನಾಟಕಹರಿದಾಸಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿದ್ದರೂ, ಈ ಶಬ್ದ ಒಂದು ಕಾಲದಲ್ಲಿ ವ್ಯಾಪಕವಾದ ಅರ್ಥದಲ್ಲಿ ಪ್ರಯುಕ್ತವಾಗಿತ್ತು. ದಾಸಶಬ್ದವು ಪುರಾಣೇತಿದಾಸಸಾಹಿತ್ಯಗಳಲ್ಲಿ ವಿಪುಲವಾಗಿ ಬಳಕೆಯಾಗಿದೆ. ವಾಲ್ಮೀಕಿ ತನ್ನ ರಾಮಾಯಣದಲ್ಲಿ ಈ ದಾಸ ಶಬ್ದವನ್ನು ಬಹಳಷ್ಟು ಬಾರಿ ಬಳಸಿದ್ದಾನೆ.

"ದಾಸೋಹಂ ಕೋಸಲೇಂದ್ರಸ್ಯ ರಾಮಸ್ಯಾಕ್ಲಿಷ್ಟಕರ್ಮಣಃ". ಎಂದು ದಾಸಶ್ರೇಷ್ಠನಾದ ಹನುಮಂತನು ಸುಂದರಕಾಂಡದಲ್ಲಿ ಬಹಳಷ್ಟು ಬಾರಿ ಹೇಳಿ ಕೊಂಡಿರುವನು. ವೇದವ್ಯಾಸರ ಗ್ರಂಥಗಳು ವ್ಯಾಸಸಾಹಿತ್ಯಗಳು. ಈ ವ್ಯಾಸರ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ನಂತರ ಕಾಲದಲ್ಲಿ ಅನೇಕ ಜ್ಞಾನಿಗಳಿಂದ ರಚಿಸಲ್ಪಟ್ಟ ಗ್ರಂಥಗಳೆಲ್ಲವೂ ದಾಸಸಾಹಿತ್ಯಗಳೇ. ಆಚಾರ್ಯ ಮಧ್ವರು ಅನೇಕ ಗ್ರಂಥಗಳನ್ನು ರಚಿಸಿದ್ದರೂ, ಪ್ರಸಿದ್ಧವಾದ ಅವರ ಗ್ರಂಥಗಳು 37. ಇವುಗಳು ಮೂಲಮೂವತ್ತೇಳುಗ್ರಂಥಗಳೆಂದೇ ಪ್ರಖ್ಯಾತವಾಗಿವೆ. ಈ 37 ಎಂಬ ಸಂಖ್ಯೆ ವಿಶಿಷ್ಟಾರ್ಥದ್ಯೋತಕವಾಗಿದೆ. ಭಾರತೀಯರಲ್ಲಿ ಸಂಖ್ಯಾ ಪ್ರಯೋಗಕ್ಕೆ ಹೆಚ್ಚಿನ ಮಹತ್ವವಿದೆ. ಸಂಖ್ಯೆಯಿಂದ ವಿಷಯವನ್ನು ಪ್ರತಿಪಾದಿಸುವುದೂ ಒಂದು ಸಂಪ್ರದಾಯ. ಭಾರತವೆಲ್ಲವೂ 18ರ ಸಂಖ್ಯೆಯಲ್ಲಿ ಹೆಣೆಯಲ್ಪಟ್ಟಿದೆ. ರಾಮಾಯಣಕ್ಕೆ 7 ರ ನಂಟು ಹೆಚ್ಚು. ಗೋರಾಬಾಳ್‌ಹನುಮಂತರಾಯರೇ ಮೊದಲಾದ ಜ್ಞಾನಿಗಳು, ಆಚಾರ್ಯಮಧ್ವರ ಪ್ರಸಿದ್ಧ ಗ್ರಂಥಗಳನ್ನು ಆಧರಿಸಿ ನಿಂತ 37 ಎಂಬ ಸಂಖ್ಯೆಯಿಂದ, ಆಚಾರ್ಯರು ದಾಸರೆಂತಲೂ, ಅವರ ಗ್ರಂಥಗಳು ದಾಸಸಾಹಿತ್ಯಗಳೆಂತಲೂ ಹೇಳಿರುವರು. ತವರ್ಗದಲ್ಲಿದಕಾರವು 3ನೆಯ ಅಕ್ಷರ. ಯ–ರ–ಲ–ವ ಶ–ಷ–ಸ–ಹ–ಳ–ಗಳಲ್ಲಿ ಸಕಾರವು 7ನೇ ಅಕ್ಷರ. ಇವುಗಳನ್ನು

ಸೇರಿಸಿದಾಗ ದಾಸ ಶಬ್ದವು ವ್ಯಕ್ತವಾಗುವುದು. ಇದೇ ದಾಸಶಬ್ದವನ್ನು ಹಿಂದಿನಿಂದ ಓದಿದಲ್ಲಿ 'ಸದಾ' ಆಗುವುದು. ಇವರಿಂದ ಆಚಾರ್ಯರು ಸದಾ ಹರಿದಾಸರೆಂತಲೂ, ಅವರ ಸಮಗ್ರ ಸಾಹಿತ್ಯ ದಾಸಸಾಹಿತ್ಯವೆಂತಲೂ ಸ್ಪಷ್ಟವಾಗುವುದು.

ಹರಿದಾಸಸಾಹಿತ್ಯವು ದ್ವೈತ ಸಂಪ್ರದಾಯವನ್ನು ಆಶ್ರಯಿಸಿ ನಿಂತಿದ್ದರೂ, ಅದು ತನ್ನ ಪ್ರಭಾವವನ್ನು ಸರ್ವತೋಮುಖವಾಗಿ ಬೀರಿದೆ. ಈ ಸಾಹಿತ್ಯದಲ್ಲಿ ಕೇವಲ ವೇದಾಂತ ವಿಷಯಗಳು ಮಾತ್ರವಲ್ಲದೆ, ಸಾಮಾನ್ಯಮಾನವನನ್ನು ಸನ್ಮಾರ್ಗದಲ್ಲಿ ನಡೆಸಿ, ಭಗವಂತನತ್ತ ಅವನ ಮನ ಸೆಳೆಯಲು ಬೇಕಾದ ಸರ್ವಸಾಧನೆಗಳು ಸ್ಪಷ್ಟವಾಗಿ ಹೇಳಲ್ಪಟ್ಟಿವೆ. ಈ ದಾಸ ಸಾಹಿತ್ಯದ ಪ್ರಧಾನಗುರಿ, ಕಲುಷಿತವಾದ ಈ ಕಲಿಯುಗದ ಸಮಾಜದಲ್ಲಿ ಜೀವಿಸಿ, ಅಸ್ವಸ್ಥಚಿತ್ತನಾದ ಜೀವಿಗೆ, ಹಿತವಾದ ರೀತಿಯಲ್ಲಿ ಸುಲಭವಾಗಿ ಆಚರಿಸಲು ಯೋಗ್ಯವಾದ ಧರ್ಮಗಳನ್ನು ಹೇಳುತ್ತಾ, ಸಾರಾಸಾರಪದಾರ್ಥಗಳ ವಿವೇಚನೆಯನ್ನು ದೃಷ್ಟಾಂತ ಪೂರ್ವಕವಾಗಿ ತೋರಿ, ಅವನ ಮನವನ್ನು ನಿರ್ಮಲ ಮಾಡಿ, ಅಲ್ಲಿ ಹರಿಭಕ್ತಿಯ ಬೀಜವನ್ನು ನೆಟ್ಟು, ಮುಕ್ತಿಯ ಪಥಕ್ಕೆ ಸೇರಿಸುವುದೇ ಆಗಿದೆ.

ಈ ದಾಸಸಾಹಿತ್ಯವು ಕೆಲವೆಡೆಗಳಲ್ಲಿ ಪ್ರಭುಸಮ್ಮಿತೆಯಂತೆಯೂ, ಕೆಲವೆಡೆಗಳಲ್ಲಿ ಮಿತ್ರಸಮ್ಮಿತೆಯಂತೆಯೂ, ಮತ್ತೆ ಕೆಲವೆಡೆ ಕಾಂತಾಸಮ್ಮಿತೆಯಂತೆಯೂ ತೋರುವುದು. ಸಂದರ್ಭೋಚಿತವಾಗಿ ಮೂರುರೂಪಧರಿಸಿದ ಈ ಸಾಹಿತ್ಯದ ಔನ್ನತ್ಯವನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ. ಹರಿದಾಸರ ಪರಂಪರೆಯಲ್ಲಿ ಮೂರುಯುಗಗಳು ಗತಿಸಿಹೋಗಿವೆ. ನರಹರಿತೀರ್ಥರಿಂದ ಹಿಡಿದು ವಿಜಯದಾಸರವರೆವಿಗೆ ನಡೆದು ಬಂದ ಯುಗ ಪ್ರಾರಂಭದ ಯುಗ. ವಿಜಯದಾಸರಿಂದ ಪ್ರಾರಂಭವಾಗಿ ಪ್ರಾಣೇಶದಾಸರವರೆವಿಗಿರುವ ಯುಗ ಎರಡನೇ ಯುಗ. ಪ್ರಾಣೇಶದಾಸರಿಂದ ಹಿಡಿದು ಸುಂದರದಾಸರವರೆವಿಗೆ ಇರುವ ಯುಗ ಮೂರನೇ ಯುಗ.

ಈ ಮೂರುಯುಗಗಳಲ್ಲಿ ದಾಸಸಾಹಿತ್ಯವನ್ನು ಮೂರುಆಶ್ರಮಕ್ಕೆ ಸೇರಿದ ಜ್ಞಾನಿಗಳು ಪೋಷಿಸಿ ಬೆಳೆಸಿಕೊಂಡು ಬಂದಿದ್ದಾರೆ. ನರಹರಿತೀರ್ಥರಿಂದ ಹಿಡಿದು ವಿದ್ಯಾಪ್ರಸನ್ನರವರೆವಿಗೆ ಇರುವವರೆಲ್ಲರು ಯತಿಗಳು. ಇವರೆಲ್ಲರೂ ಯತ್ಯಾಶ್ರಮದಲ್ಲಿದ್ದು ಪೀಠಾಧಿಪತಿಗಳೆನಿಸಿಕೊಂಡು, ದ್ವೈತಸಿದ್ಧಾಂತಪ್ರತಿಷ್ಠಾಪನೆಗಾಗಿ ಸಂಸ್ಕೃತದಲ್ಲಿ ವೇದಾಂತಗ್ರಂಥಗಳನ್ನು ರಚಿಸುತ್ತಾ, ಮತ್ತೊಂದು ಕಡೆಯಿಂದ ಶ್ರೀಸಾಮಾನ್ಯರಿಗಾಗಿ ಕನ್ನಡದಲ್ಲಿ ಕೃತಿಗಳನ್ನು ರಚಿಸಿ, ದಾಸಸಾಹಿತ್ಯದ ಭಂಡಾರವನ್ನು ಬೆಳೆಸಿದರು. ಪುರಂದರದಾಸರು, ಕನಕದಾಸರು, ಮಹೀಪತಿದಾಸರು, ಪ್ರಸನ್ನವೇಂಕಟದಾಸರು ವಿಜಯದಾಸರೇ ಮೊದಲಾದವರು ಗೃಹಸ್ಥಾಶ್ರಮಿಗಳು. ಗೋಪಾಲದಾಸರೇ ಮೊದಲಾದವರು ಬ್ರಹ್ಮಚಾರಿಗಳು. ಇವರೆಲ್ಲರೂ ಮಹಾಜ್ಞಾನಿಗಳು; ಸ್ವತಃ ಪಂಡಿತರು, ವ್ಯಾಸರಾಜರು, ವರದೇಂದ್ರರು – ವ್ಯಾಸತತ್ತ್ವಜ್ಞರಂಥಾ ಯತಿಗಳ ಆಶ್ರಯದಲ್ಲಿದ್ದು ಸಮಾಜದ ಶ್ರೇಯಸ್ಸಿಗಾಗಿ ಶ್ರಮಿಸಿ, ಕನ್ನಡ ಕೃತಿಗಳಿಂದ ದಾಸಸಾಹಿತ್ಯವನ್ನು ಉತ್ತುಂಗಶಿಖರಕ್ಕೆ ಏರಿಸಿದ ಧನ್ಯ ಜೀವಿಗಳು. ಮೊದಲನೇ ಯುಗಕ್ಕೆ ಸೇರಿದ ಮಹಿತಾತ್ಮರೇ ಪ್ರಸನ್ನವೇಂಕಟದಾಸರು. ಶ್ರೀನಿವಾಸನಿಂದಲೇ ಅನುಗ್ರಹಿತರಾಗಿ, ಅವನಿಂದಲೇ ಅಂಕಿತ ಪಡೆದು, ಹರಿದಾಸಮಣಿಮಾಲೆಯಲ್ಲಿ ಪದಕಪ್ರಾಯರಾಗಿ ಬಾಳಿ ಬದುಕಿದ ಧನ್ಯಜೀವಿಗಳು.



## ದಾಸರ ಜೀವನ ವೇದಾಂತ ಸಂದೇಶ

ಸಾತ್ವಿಕ– ರಾಜಸ– ತಾಮಸರೆಂದು ಜೀವರು ಸ್ವರೂಪತಃ ಮೂರು ವಿಧವಾಗಿರುವರು. ಸಾತ್ವಿಕಜೀವಿಗಳು ಸೌಶೀಲ್ಯಾದಿಗುಣಭರಿತರಾಗಿ. ಜ್ಞಾನ – ವೈರಾಗ್ಯ ಭಕ್ತಿಗಳನ್ನು ಬೆಳೆಸಿಕೊಂಡು, ಸಮಾಜದಲ್ಲಿ ಆದರ್ಶಜೀವನವನ್ನು ನಡೆಸಿ, ಭಗವತ್ಕೃಪೆಯನ್ನು ಸಂಪಾದಿಸಿ, ಕೊನೆಗೆ ಮೋಕ್ಷವನ್ನು ಹೊಂದುವರು. ಇದಕ್ಕೆ ವಿರುದ್ಧಸ್ವಭಾವದವರು, ತಮೋಜೀವಿಗಳು. ಇವರು ಸಮಾಜಕಂಟಕರಾಗಿ, ನಿರಂತರ ಭಗವಂತನನ್ನೂ, ಧರ್ಮವನ್ನೂ ದ್ವೇಷಿಸುತ್ತಾ, ಸಂಸ್ಕೃತಿ – ಸಂಪ್ರದಾಯ – ಸದಾಚಾರಗಳಿಂದ ದೂರರಾಗಿ, ಕೊನೆಯಲ್ಲಿ ಅಂಧಂತ ಮನಸ್ಸನ್ನು ಸೇರುವರು. ಇದನ್ನು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ "ಮಾಂ ದ್ವಿಷಂತಃ..... ಮಾಂ ಅಪ್ರಾಪ್ಯೈವ ತೇ ಯಾಂತಿ ಅದಮಾಂ ಗತಿಂ" ಎಂದು ಹೇಳಿರುವನು.

ಸೃಷ್ಟಿಯ ಪ್ರಾರಂಭದಲ್ಲಿ ಅಸೃಜ್ಯರಾಶಿಯಲ್ಲಿರುವ ಒಬ್ಬ ಸಾತ್ವಿಕಜೀವಿಯು, ಭಗವಂತನ ಕೃಪೆಗೆ ಪಾತ್ರನಾಗಿ ಸೃಷ್ಟಿಗೆ ಬರುವನು. ಪಶು – ಪಕ್ಷ್ಯಾದಿ ಅನೇಕಯೋನಿಗಳಲ್ಲಿ ಸಂಚರಿಸುತ್ತಾ ಒಂದು ಶುಭಮುಹೂರ್ತದಲ್ಲಿ ಸಾಧನೆಗೆ ಅನುವಾದ ಮಾನವ ಶರೀರವನ್ನು ಪಡೆಯುವನು. ಆಗ ಭಗವಚ್ಚಿಂತನೆಯಿಂದ ದೂರಾಗದೆ, ಕಷ್ಟ ಕಾರ್ಪಣ್ಯವನ್ನುನುಭವಿಸುತ್ತಾ ಮುಂದೆ ಸಾಗುವನು. ಕೊನೆಗೊಂದು ದಿನ ಹರಿಗುರುಗಳ ದಯೆಯಿಂದ ಪೂರ್ಣವಿರಕ್ತನಾಗಿ, ಸಂಸಾರವನ್ನು ಜರಿದು, ಭಗವಂತನನ್ನೂ ಹುಡುಕುತ್ತಾ ಸಾಗುವನು. ಗುರುಗಳ ದರ್ಶನದಿಂದ ಸಜ್ಜನರ ಸಹವಾಸದಲ್ಲಿ ಜೀವನ್ಮುಕ್ತನಾಗುವನು. ಇದು ಸಾಧಕಜೀವಿಯು ನಡೆದು ಬರುವ ದಾರಿ :

ಪ್ರಸನ್ನವೇಂಕಟದಾಸರ ಜೀವನ ಸಾಧಕಜೀವಿಯ ಜೀವನಕ್ಕೆ ಕೈಗನ್ನಡಿಯಾಗಿದೆ. ವರದೇಶವಿಠಲರು ಸಾತ್ವಿಕ ಜೀವಿಯ ಮೇಲೆ ಭಗವಂತನ ಅನುಗ್ರಹ ಉಂಟಾಗುವ ಬಗೆಯನ್ನೂ, ಅದು ಹಂತಹಂತವಾಗಿ ಬೆಳೆದು ವೃದ್ಧಿಯನ್ನು ಹೊಂದಿ ಕೊನೆಗೆ ಜೀವಿಯನ್ನು ಗಮ್ಯಸ್ಥಾನಕ್ಕೆ ಕೊಂಡೊಯ್ಯುವ ವಿಧಾನವನ್ನೂ, ರಾಮ ಕೃಷ್ಣರ ಕಥೆಯಲ್ಲಿ ಬರುವ ಅಹಲ್ಯೆ ಹಾಗೂ ಕುಬ್ಜೆಯರ ಕಥೆಗಳನ್ನು ದೃಷ್ಟಾಂತವಾಗಿ ಕೊಟ್ಟು ಹೇಳಿರುವರು.

**"ಶಿಲೆಯ ಪಾದರಜದಿ ಸ್ತ್ರೀ ಮಾಡಿದ**
**ಸುಲಲಿತ ಗುಣನಿಧಿ ರಾಮಹರೇ**
**ಬಲುವಕ್ರಾಗಿದ್ದ ಬಲೆಯ ಕ್ಷಣದಲಿ**
**ಚಲುವೆಯ ಮಾಡಿದ ಕೃಷ್ಣ ಹರೇ"**

ಈ ಚರಣದಲ್ಲಿ ತ್ರೇತಾ ಹಾಗೂ ದ್ವಾಪರಗಳಿಗೆ ಸಂಬಂಧಿಸಿದ ಎರಡು ಕಥೆಗಳು ಹೆಣೆಯಲ್ಪಟ್ಟಿವೆ. ಒಂದು ರಾಮನ ಕೃಪೆಗೆ ಪಾತ್ರಳಾದ ಅಹಲ್ಯೆಯ ಕಥೆ. ಮತ್ತೊಂದು ನಿರಂತರ ಕೃಷ್ಣಧ್ಯಾನದಲ್ಲಿ ಕಾಲಕಳೆಯುತ್ತಿದ್ದ ಕುಬ್ಜೆಯ ಕಥೆ. ಅಹಲ್ಯೆ ಶಿಲೆಯಾಗಿದ್ದಳು. ಶಿಲಾರೂಪ ಸಾಧನೆಗೆ ಅನುವಾದುದಲ್ಲ. ಅಲ್ಲಿ ಸಾಧನೆ ಇಲ್ಲ. ರಾಮನ ಪಾದಸ್ಪರ್ಶದಿಂದ ಶಿಲೆಗೆ ಸಾಧನೆಗೆ ಯೋಗ್ಯವಾದ ಶರೀರಪ್ರಾಪ್ತವಾಯಿತು. ಸಾಧನಶರೀರ ಬಂದರೂ ಅದು ಕುರೂಪದಿಂದ ಕೂಡಿ, ಕಂಸನಂಥಾ ದುಷ್ಟರ ಮಧ್ಯದಲ್ಲಿತ್ತು. ಆದರೆ ಸ್ವಾಮಿಯ ಸಂಕಲ್ಪದಂತೆ

ಕುಬ್ಜೆ ಕುರೂಪಿಯಾಗಿದ್ದರೂ, ದುಷ್ಟಕಂಸನ ರಾಜ್ಯದಲ್ಲಿದ್ದರೂ, ಕೃಷ್ಣನ ಚಿಂತನೆಯಲ್ಲಿ ಕಾಲಕಳೆಯುತ್ತಿದ್ದಳು. ಕೃಷ್ಣನೆ ಅವಳಿದ್ದಲ್ಲಿಗೆ ಬಂದು, ಅವಳನ್ನು ಸುಂದರಿಯನ್ನಾಗಿ ಮಾಡಿ ತನ್ನವಳನ್ನಾಗಿ ಮಾಡಿಕೊಂಡ. ಇದೇ ಸಾಧಕಜೀವಿಯ ಪಯಣಮಾರ್ಗವೂ ಹೌದು. ಸಾತ್ವಿಕ ಜೀವಿ ಅಸ್ಪೃಶ್ಯರಾಶಿಯಲ್ಲಿ (ಸೃಷ್ಟಿಗೆ ಬರುವುದಕ್ಕೆ ಮೊದಲು) ಸಾಧನೆಗೆ ಉಪಯುಕ್ತವಾಗದ ಶರೀರದಿಂದ ಕೂಡಿ, ಶಿಲೆಯಂತೆ ಕೇವಲ ಶ್ವಾಸೋಚ್ಛ್ವಾಸವನ್ನು ಮಾತ್ರ ಮಾಡುತ್ತಾ ಇರುತ್ತಾನೆ. ಅಂಥಾ ಜೀವಿ ಭಗವಂತನ ದೃಷ್ಟಿಗೆ ಬಿದ್ದು, ಅವನ ಕೃಪೆಯಿಂದ ಸೃಷ್ಟಿಗೆ ಬಂದು, ಸಾಧನ ಶರೀರವನ್ನು ಪಡೆಯುತ್ತಾನೆ. ರಾಮನ ಕೃಪೆಯಿಂದ ಕಲ್ಲಾಗಿದ್ದ ಅಹಲ್ಯೆ ಬಾಲೆಯಾದಂತೆ. ಸೃಷ್ಟಿಗೆ ಬಂದು ಜೀವಿ ಸಾಧನಶರೀರವನ್ನು ಪಡೆದಿದ್ದರೂ, ಕಾಮಕ್ರೋಧಾದಿಗಳಿಂದಲೂ, ಸಂಸಾರ ಬಂಧನದಿಂದಲೂ, ಸುಖದುಃಖಾದಿಗಳನ್ನು ಅನುಭವಿಸುತ್ತಾ, ಕಂಸನ ರಾಜ್ಯದಲ್ಲಿ ಕುರೂಪಿಯಾಗಿದ್ದ ಕುಬ್ಜೆಯಂತೆ ಇರುತ್ತಾನೆ. ಭಗವಂತನ ಕೃಪಾಬಲದಿಂದ ಸಂಸಾರದಲ್ಲಿದ್ದರೂ, ಕಂಸಾರಿಯನ್ನೇ ಸದಾ ಸ್ಮರಿಸುತ್ತಾ, ಅವನ ಕರಾವಲಂಬನೆಗಾಗಿ ಕುಬ್ಜೆಯಂತೆ ಹಾತೊರೆಯುತ್ತಿರುತ್ತಾನೆ. ಕುಬ್ಜೆಗೆ ಕೃಷ್ಣನ ಕರಾವಲಂಬನೆ ದೊರೆತಂತೆ, ಸಂತತ ಭಗವಂತನ ಚಿಂತನೆಯಲ್ಲಿ ಕಾಲ ಕಳೆಯುವ ಸಾತ್ವಿಕ ಜೀವಿಗೂ, ಒಂದು ಶುಭೋದಯದಲ್ಲಿ ಶ್ರೀ ಹರಿಯ ದರ್ಶನಾದಿಗಳು ದೊರೆತು ಧನ್ಯನಾಗುವನು.

ಕಾರಣಜನ್ಮರಾದ ಪ್ರಸನ್ನವೇಂಕಟದಾಸರು ಶ್ರೀಶನ ಅನುಗ್ರಹದಿಂದ ಕರ್ಮಭೂಮಿ ಎನಿಸಿದ ಪವಿತ್ರಭಾರತಾವನಿಯಲ್ಲಿ ಜನಿಸಿದರು. ಸಂಸಾರಬಂಧನಕ್ಕೆ ಸಿಲುಕಿದ್ದರೂ, ಸ್ವತಃ ಕಾಮಕ್ರೋಧಾದಿಗಳಿಂದ ದೂರಾಗಿದ್ದರು. ಅಣ್ಣನ ಹೆಂಡತಿಯೇ ಇವರ ಪಾಲಿಗೆ ಕಾಮ, ಕ್ರೋಧಾದಿಗಳ ಸ್ವರೂಪಳಾದಳು. ಸುಖದುಃಖಾದಿಗಳಿಂದ ಬಳಲಿದರು. ಮನಸ್ಸು ಮಾತ್ರ ಭಗವಂತನನ್ನು ಮರೆಯಲಿಲ್ಲ. ಬಾಲ್ಯದಿಂದಲೇ ಭಗವಂತನಲ್ಲಿ ಆಸಕ್ತಿ. ಸುಯೋಗ ಸಂಧಿಸಿತು. ವೈನಿಯ ನಿಷ್ಠೂರವೇ ಪ್ರಸನ್ನವೇಂಕಟರಲ್ಲಿ ವೈರಾಗ್ಯವನ್ನು ಬೆಳಗಿಸಿತು. ಸಂಸಾರದಲ್ಲಿ ವಿರಕ್ತಿ, ಶ್ರೀಶನಲ್ಲಿ ರಕ್ತಿ ಹೆಚ್ಚಿತು. ಭಗವಂತನಿಗಾಗಿ ಮನಸ್ಸು ಹಾತೊರೆಯಿತು. ಮಂತ್ರಾಲಯ ಗುರುಗಳ ಮಾರ್ಗದರ್ಶನದಲ್ಲಿ ಶ್ರೀನಿವಾಸನ ನಿತ್ಯಸನ್ನಿಧಾನದಿಂದ ಒಪ್ಪುವ ಭೂವೈಕುಂಠವೆನಿಸಿದ ವೆಂಕಟಾದ್ರಿಗೆ ಬಂದರು. ಶ್ರೀನಿವಾಸಾಭಿನ್ನ ಬಿಂಬನ ದರ್ಶನವಾಯಿತು. ಜೀವನ್ಮುಕ್ತರಾದರು. ಭಗವದ್ಭಕ್ತರ ನಡೆ–ನುಡಿ – ಜೀವನಗಳೆಲ್ಲವೂ ಸಂದೇಶಾತ್ಮಕಗಳಾಗಿ ತತ್ತ್ವಬೋಧಕಗಳಾಗಿರುತ್ತವೆ.

**ಪ್ರಸನ್ನವೇಂಕಟರ ಸಾಹಿತ್ಯವೈಭವ**

ದಾಸಸಾಹಿತ್ಯಾಭಿಮಾನಿಗಳು ಕಳೆದುಕೊಂಡ ದಾಸಸಾಹಿತ್ಯಸಂಪತ್ತು ಅಪಾರ. ಉಳಿಸಿಕೊಂಡದ್ದು ಬಹಳ ಸ್ವಲ್ಪ. ಪುರಂದರದಾಸರು ರಚಿಸಿದ ಕೀರ್ತನೆಗಳ ಸಂಖೆ ಮೂರು ಲಕ್ಷದ ಎಪ್ಪತ್ತೈದುಸಾವಿರ. ಇಂದು ದೊರೆಯುತ್ತಿರುವ ಪುರಂದರದಾಸರ ಕೀರ್ತನೆಗಳ ಸಂಖ್ಯೆ ಒಂದುಸಾವಿರವನ್ನೂ ದಾಟಿಲ್ಲ. ಇದರಂತೆ ಪ್ರಸನ್ನವೇಂಕಟರ ಸಾಹಿತ್ಯವು ಸಹ ಬಹಳಷ್ಟು ಕಾಲಗರ್ಭದಲ್ಲಿ ಕಲೆತು ಹೋಗಿರಬಹುದು. ಸುದೈವವೆಂಬಂತೆ ಭಾಗವತ ದಶಮಸ್ಕಂಧ ಪೂರ್ವಾರ್ಧದ ಅನುವಾದವು ಮಾತ್ರ ಪೂರ್ಣ ದೊರೆತಿರುವುದು. ದಾಸರು



ಕೀರ್ತನೆ, ಸುಳಾದಿ, ಉಗಾಭೋಗ ಮೊದಲಾದ ಎಲ್ಲ ಪ್ರಕಾರಗಳನ್ನು ಬಳಸಿ ಸಮಾಜಕ್ಕೆ ಹಿತಬೋಧ ನೀಡಿರುವರು. ಸುಪ್ರಭಾತದಿಂದ ಹಿಡಿದು ಲಾಲಿಸೇವೆಯವರೆವಿಗೆ ಇರುವ ಭಗವಂತನ ಎಲ್ಲಾ ಸೇವಾವಿಧಾನಗಳನ್ನು ದಾಸರು ತಮ್ಮ ಕೃತಿಗಳಲ್ಲಿ ಹೇಳಿರುವರು. ಈ ಸೇವೆಗಳ ಅಂತರಾರ್ಥಗಳನ್ನು ಸಹ ತಿಳಿಯುವಂತೆ ಮಾಡಿರುವರು.

ಆಹ್ನಿಕ, ತಾರತಮ್ಯ, ನವವಿಧಭಕ್ತಿಗಳು, ಭಗವಂತನ ವಿವಿಧ ಅವತಾರಗಳ ವರ್ಣನೆ, ಕೃಷ್ಣನ ಕೀರ್ತನೆಗಳಲ್ಲಿ ಆಧ್ಯಾತ್ಮಚಿಂತನೆ ಹೀಗೆ ಸಾಧನೆಗೆ ಅವಶ್ಯಕಗಳಾದ ಅನೇಕ ವಿಷಯಗಳನ್ನು ದಾಸಾರ್ಯರು ತಮ್ಮ ರಚನೆಗಳಲ್ಲಿ ತುಂಬಿರುವರು.

**ಸುಪ್ರಭಾತ**

ಆನಂದತೀರ್ಥಭಗವತ್ಪಾದರು ಪರಬ್ರಹ್ಮನಾರಾಯಣನನ್ನು ಅನಂತಕಲ್ಯಾಣ ಗುಣಪೂರ್ಣನನ್ನಾಗಿಯೂ, ದೋಷದೂರನನ್ನಾಗಿಯೂ ಹೇಳಿರುವರು.

"ನಾರಾಯಣಂ ಗುಣೈಃ ಸರ್ವೈಃ ಉದೀರ್ಣಂ ದೋಷವರ್ಜಿತಂ". ಭಗವಂತನ ಉಪಾಸನೆಗೆ ಗುಣಪೂರ್ಣತ್ವ ಜ್ಞಾನ ಮಾತ್ರ ಸಾಕಾಗಲಾರದು. ಅವನು ದೋಷಗಳಿಂದ ಅತ್ಯಂತದೂರ ಎನ್ನುವ ಜ್ಞಾನವೂ ಅತ್ಯಾವಶ್ಯಕ. ಅನಂತದೋಷಗಳಲ್ಲಿ ನಿದ್ರೆಯು ಸಹ ಒಂದು ದೋಷವೇ ಆಗಿರುವುದು. ಭಕ್ತರು ಭಗವಂತನಿಗೆ ಭಕ್ತಿಯಿಂದ ಸಮರ್ಪಿಸುವ ರಾತ್ರಿಯ ಲಾಲಿ ಸೇವೆ, ಉದಯದ ಸುಪ್ರಭಾತಸೇವೆಗಳು ಒಂದು ದೃಷ್ಟಿಯಲ್ಲಿ ಭಗವಂತನಲ್ಲಿ ದೋಷಾರೋಪಣೆಗಳೇ ಆಗಿವೆ. ಶ್ರಮಪರಿಹಾರಕ್ಕಾಗಿ ನಿದ್ರೆ; ಶ್ರಮಕಡಿಮೆಯಾದಾಗ ಎಚ್ಚರಿಕೆ. ನಿದ್ರೆ ದೋಷಸಹಿತ ಎನ್ನುವುದಕ್ಕೂ, ಎಚ್ಚರ ದೋಷದಿಂದ ಮುಕ್ತನಾದ ಎನ್ನುವುದಕ್ಕೂ ಸಾಕ್ಷಿಗಳು. ದಾಸರು ಭಗವಂತನಿಗೆ ಶ್ರಮವಾಗಿದೆ ಎಂದು ಲಾಲಿ ಹಾಡಿದವರಲ್ಲ. ಇದರಂತೆ ಭಗವಂತನು ಸೃಷ್ಟಿ–ಸ್ಥಿತ್ಯಾಗಳನ್ನು ಸತತ ಮಾಡಿ ಬಳಲಿ ನಿದ್ರಿಸಿದ್ದಾನೆ. ಅವನನ್ನು ಎಬ್ಬಿಸಬೇಕೆಂಬ ಉದ್ದೇಶದಿಂದ ದಾಸರು ಭಗವಂತನಿಗೆ ಸುಪ್ರಭಾತ ಹಾಡಿದವರಲ್ಲ.

ಭಗವಂತ! ನೀನು ಅನಂತಕಲ್ಯಾಣಗುಣಪೂರ್ಣ. ನಿನ್ನ ಮಹಿಮೆಗಳು ಅನಂತ. ನಿನ್ನ ಅವತಾರಗಳ ಸೊಬಗು ಮನವಚನಗಳಿಗೆ ಅತಿದೂರವಾದವುಗಳು. ಅಂತರಂಗದಲ್ಲಿ ಹುದುಗಿದ ಈ ಭಾವನೆಗಳನ್ನು ಒಪ್ಪಿಸುವುದಕ್ಕಾಗಿ ಲಾಲಿಸೇವೆ ಪ್ರಾರಂಭವಾಯಿತು. ಇದರಂತೆ ಸುಪ್ರಭಾತಸೇವೆಯು ಸಹ ಭಗವಂತನ್ನು ಎಬ್ಬಿಸುವುದಕ್ಕಾಗಿ ಅಲ್ಲ. ಸುಪ್ರಭಾತದ ಹಿನ್ನೆಲೆಯಲ್ಲಿ ಭಕ್ತನ ಪ್ರಾರ್ಥನೆ ತುಂಬಿರುತ್ತದೆ. "ಓ ಭಗವಾನ್, ಪ್ರತಿದಿನದಲ್ಲೂ ಅರುಣೋಧಯವಾಗುವುದು. ಸೂರ್ಯನು ಉದಯಿಸುವವು. ಬೆಳಕನ್ನು ಚೆಲ್ಲಿ ಕತ್ತಲನ್ನು ಓಡಿಸುವನು. ಆದರೆ ಇದು ನನಗೆ ಮುಖ್ಯವಲ್ಲ. ನನ್ನ ಹೃದಂತರಾಳದಲ್ಲಿ ಅಜ್ಞಾನವೆಂಬ ಕತ್ತಲು ತುಂಬಿದೆ. ಇಲ್ಲಿ ನಿನ್ನ ವಿಷಯಕವಾದ ಪ್ರೇಮದ ಅರುಣೋದಯವು ಎಂದಿಗಾಗುವುದು? ಸುಷುಪ್ತಿ – ಸ್ವಪ್ನ, ಜಾಗ್ರದವಸ್ಥೆಗಳಿಗೆ ಕಾರಣನಾದ ಪ್ರಾಜ್ಞ – ತೈಜಸ – ವಿಶ್ವಾ ಭಿನ್ನನಾದ ಓ ನಾರಾಯಣಾ, ಅಜ್ಞಾನವೆಂಬ ಕತ್ತಲಿನಿಂದ ತುಂಬಿದ ನನ್ನ ಹೃದಯದಲ್ಲಿ ಓ ನಾರಾಯಣಾ, ಜ್ಞಾನಜ್ಯೋತಿಯನ್ನು ಬೆಳಗಿಸಿ, ಭಕ್ತಿಯ ಅರುಣಕಿರಣಗಳನ್ನು ಚೆಲ್ಲಲು ಅನುಗ್ರಹೋನ್ಮುಖನಾಗು. ಇದಕ್ಕಾಗಿ ಏಳು." ಈ ಪ್ರಾರ್ಥನೆಯೇ ಸುಪ್ರಭಾತದ ನಿಜಾರ್ಥ. ಈ ಭಾವವನ್ನೆ

ಆದಿಕವಿವಾಲ್ಮೀಕಿ ತನ್ನ ಸುಪ್ರಭಾತರೂಪವೆನಿಸಿದ ಅಮೃತಮಯವಾಣಿಯಲ್ಲಿ ತುಂಬಿ ಹಾಡಿರುವನು.

**"ಕೌಸಲ್ಯಾ ಸುಪ್ರಜಾ ರಾಮ ಪೂರ್ವಾಸಂಧ್ಯಾ ಪ್ರವರ್ತತೇ**
**ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಮ್"**

ಇದು ರಾಮನಿಗಾಗಿ ಕವಿವಾಲ್ಮೀಕಿ ಹಾಡಿದ ಎರಡನೆಯ ಸುಪ್ರಭಾತಗೀತೆ. "ಪುರುಷೋತ್ತಮನಾದ ರಾಮ! ನಿನ್ನ ಅನುಗ್ರಹದಿಂದ ನನ್ನ ಹೃದಯದಲ್ಲಿ ಪೂರ್ವ ಸಂಧೆಯಂತಿರುವ ಭಕ್ತಿಯು ಪ್ರಾರಂಭವಾಗಿದೆ (ನರಶಾರ್ದೂಲ ಕೌಸಲ್ಯಾಸುಪ್ರಜಾ ರಾಮ ಪೂರ್ವಾಸಂಧ್ಯಾ ಪ್ರವರ್ತತೆ) ಬೆಳಕಿನಿಂದ ತುಂಬಿದ ಹಗಲಿನಂತಿರುವ ನನ್ನ ಜ್ಞಾನಮಯವಾದ ಜೀವನದಲ್ಲಿ, ನಿನಗೆ ಸಂಬಂಧಿಸಿದ ಸತ್ಕರ್ಮಗಳನ್ನು ನೀನು ಮಾಡಿ ಮಾಡಿಸು. ಇದಕ್ಕಾಗಿ ಏಳು ಉದ್ಧರಿಸು. (ದೈವಂ ಅಹ್ನಿಕಂ ಕರ್ತವ್ಯಂ)"

ಇದೇ ಅರ್ಥದಲ್ಲಿ ಪುರಂದರದಾಸರು ಸಹ,

**"ಏಳು ನಾರಾಯಣ ಏಳು ಲಕ್ಷ್ಮೀರಮಣ**
**ಏಳು ಶ್ರೀಗಿರಿಯೊಡೆಯ ವೇಂಕಟೇಶ"**
**ಕಾಸಿದ್ದ ಹಾಲುಗಳ ಕಾವಡಿಯ ತುಂಬಿಟ್ಟು**
**ಲೇಸಾಗಿ ಕೆನೆ ಮೊಸರು ಬೆಣ್ಣೆಯನೆ ಮೆದ್ದು**
**ಶೇಷಶಯನನೆ ಏಳು ಸಮುದ್ರ ಮಥನವ ಮಾಡು**
**ದೇಶ ಕೆಂಪಾಯಿತೇಳಯ್ಯಾ ಹರಿಯೇ**

...........................................................................

**ಅರವಿಂದ ಲೋಚನನೆ ಕೋಳಿ ಕೂಗಿತು ಕೇಳು**
**ಪುರಂದರ ವಿಠಲನೆ ಬೆಳಗಾಯಿತು ॥**

ಎಂದು ಹಾಡಿ ಭಗವಂತನಿಗೆ ಪ್ರಾರ್ಥನಾತ್ಮಕವಾದ ಸುಪ್ರಭಾತಸೇವೆಯನ್ನು ಸಲ್ಲಿಸಿರುವರು. ಪ್ರಕೃತ ಉಪಲಬ್ಧವಿರುವ ಪ್ರಸನ್ನವೇಂಕಟದಾಸರ ಸಾಹಿತ್ಯದಲ್ಲಿ, ಭಗವಂತನಿಗೆ ಸಂಬಂಧಿಸಿದ ಮೂರು ಸುಪ್ರಭಾತಕೀರ್ತನೆಗಳು, ರಾಘವೇಂದ್ರತೀರ್ಥರಿಗೆ ಸಂಬಂಧಿಸಿದ ಒಂದು ಸುಪ್ರಭಾತ ಗೀತೆಯು ದೊರೆಯುತ್ತಿವೆ. ಭಗವಂತನಿಗೆ ಸಂಬಂಧಿಸಿದ ಉದಯರಾಗಗೀತೆಗಳು ದಾಸ ಸಾಹಿತ್ಯದಲ್ಲಿ ವಿಪುಲವಾಗಿ ದೊರೆಯುತ್ತವೆ. ರಾಘವೇಂದ್ರತೀರ್ಥರಿಗೆ ಸಂಬಂಧಿಸಿದಂತೆ ಎರಡು ಉದಯರಾಗಗೀತೆಗಳು ಮಾತ್ರ ಕಾಣಿಸುತ್ತವೆ. ಇದರಲ್ಲಿ ಮೊದಲನೆಯದು ಪ್ರಸನ್ನ ವೇಂಕಟದಾಸರದಾದರೆ, ಎರಡನೆಯದು ಗುರುಜಗನ್ನಾಥದಾಸರು ರಚಿಸಿದ ಉದಯರಾಗಗೀತೆ. ರಾಘವೇಂದ್ರರ ಮೇಲೆ ಮೊಟ್ಟಮೊದಲು ಸುಪ್ರಭಾತಗೀತೆಯನ್ನು ರಚಿಸಿದ ಕೀರ್ತಿ ಪ್ರಸನ್ನವೇಂಕಟದಾಸರಿಗೆ ಮಾತ್ರ ಸೇರುತ್ತದೆ.

**"ಉಪ್ಪವಡಿಸಯ್ಯ ಕೃಷ್ಣ ॥ಪ॥**
**ಉಪ್ಪವಡಿಸೈ ಬೊಮ್ಮನಪ್ಪ ಭುವನಾಳಿಯು**



**ಸ್ವಪ್ಪನಾದಿ ತ್ರಯವನಪ್ಪೆ ಪಾಲ್ಗಡಲ ಮಗ**
**ಳಪ್ಪಿ ಅಹಿವರನ ಸುಪ್ಪತ್ತಿಗೆಲಿ ಒರ**
**ಗಿಪ್ಪ ತಿಮ್ಮಪ್ಪ ವ್ರಜದಿ ದಯದಿ ॥ಅ.ಪ.॥**

ಸಾಧಕಜೀವಿ ಭಗವಂತನು ಕರುಣಿಸಿ ಕೊಟ್ಟ ಸಾಧನಶರೀರವನ್ನು ಸಾರ್ಥಕ ಮಾಡಿ ಕೊಳ್ಳಬೇಕು. ಇದಕ್ಕೆ ಭಗವಂತ ಕರುಣೆಯಿಂದ ಕಣ್ತೆರೆದು ನೋಡಬೇಕು. ಭಗವಂತನ ಅನುಗ್ರಹವಾದರೆ ಮಾತ್ರ ಈ ಸಾಧನಶರೀರದ, ಶರೀರವನ್ನು ಆಶ್ರಯಿಸಿನಿಂತ 24 ತತ್ವಗಳ, ಅವುಗಳಿಗೆ ಅಭಿಮಾನಿಗಳಾದ ದೇವತೆಗಳ, ಆತತ್ತ್ವಾಭಿಮಾನಿದೇವತೆಗಳ ದ್ವಾರ ತನಗೆ ಪ್ರೇರಕನಾದ ಭಗವಂತನ ಪರಿಚಯವಾಗುವುದು. ಇದಕ್ಕಾಗಿ ಭಗವಂತನಲ್ಲಿ ಪ್ರಾರ್ಥನೆಯನ್ನು ಮಾಡಬೇಕು. ಈ ಪ್ರಾರ್ಥನಾ ರೂಪಗಳೇ ಉದಯರಾಗ ಕೀರ್ತನೆಗಳು.

ಈ ಪದದ ಪಲ್ಲವಿಯಲ್ಲಿ ದಾಸರು ಬಳಸಿದ ಕೃಷ್ಣಶಬ್ದವು ವಾಚ್ಯವಾಗಿ ನಂದಗೋಪ ಕುಮಾರನನ್ನು ಹೇಳಿದರೆ ವ್ಯುತ್ಪತ್ಯರ್ಥದಲ್ಲಿ ಬಿಂಬರೂಪಿ ಭಗವಂತನನ್ನು ತಿಳಿಸುವುದು. ಸಕಲ ಸಾತ್ವಿಕಚೇತನರನ್ನು ತನ್ನ ರೂಪ – ಗುಣ – ಕ್ರಿಯೆಗಳಿಂದ ಆಕರ್ಷಿಸಿ, ಮುಕ್ತಿಗೆ ಸೆಳೆದೊಯ್ಯುವನಾದ ಕಾರಣ ಬಿಂಬನು ಸಹ ಕೃಷ್ಣನೆ.

ಓ ಬಿಂಬಮೂರುತಿ ಏಳು; ಅನುಗ್ರಹೋನ್ಮುಖನಾಗು; ಹೃದಯಾಂತರಾಳದಲ್ಲಿ ಅಡಗಿದ ಅಜ್ಞಾನವೆಂಬ ತಮಸ್ಸನ್ನು ಓಡಿಸು. ಇದು ದಾಸರ ಪ್ರಾರ್ಥನೆ; ಪಲ್ಲವಿಯ ನಿಜಾರ್ಥ ಚತುರ್ಮುಖಬ್ರಹ್ಮ ಸಕಲಜೀವರಿಗೆ ಅಭಿಮಾನಿ, ಜೀವೋತ್ತಮರಾದ ವಾಯುದೇವರು ನಿರ್ವ್ಯಾಜದಿಂದ ಭಗವತ್ಸೇವಾರೂಪದಲ್ಲಿ ಹಂಸಮಂತ್ರವನ್ನು ಜಪಿಸುತ್ತಾ, ಶ್ವಾಸೋದ್ವಾಸಕ್ರಿಯೆ ಮಾಡಿ ಜೀವಿಯ ಜೀವನಕ್ಕೆ ಮುಖ್ಯಕಾರಣರಾಗಿರುವರು. ಸಕಲ ವೇದಾಭಿಮಾನಿನಿಯೂ, ವಿದ್ಯಾರ್ಥಿ ದೇವತೆಯೂ ಆದ ಮಹಾಲಕ್ಷ್ಮೀಯು, ಭಗವಂತನ ಅಪ್ಪುಗೆಯಲ್ಲಿ ಮಲಗಿ ಅಂತರ್ಮುಖಳಾಗಿರುವಳು. ಇದರಿಂದ ಜೀವಿಯು ಭಗವತ್ಸಂಭಂಧಿ ಜ್ಞಾನದಿಂದ ದೂರಾಗಿರುವನು. ಮಹಾಲಕ್ಷ್ಮೀಯು ಬಹಿರ್ಮುಖಳಾದಲ್ಲಿ ಮಾತ್ರ ಜೀವಿಗೆ ಜ್ಞಾನೋದಯವಾಗುವುದು, ಇದು ಭಗವಂತನ ಅನುಗ್ರಹದಿಂದ ಮಾತ್ರಸಾಧ್ಯ. ಬ್ರಹ್ಮ–ವಾಯುಗಳಿಗೆ ಪಿತನೂ, ಪ್ರೇರಕನೂ ಆದ ಪರಬ್ರಹ್ಮನು, ರಮೆಯನ್ನು ಅಪ್ಪಿಕೊಂಡು ಮಲಗಿದವನಂತೆ ಜೀವಿಯನ್ನು ಅನುಗ್ರಹಿಸದೆ ಇರುವನು. ಇಂಥಾ ಭಗವಂತನು ಏಳಬೇಕು. ಲಕ್ಷ್ಮಿಗೆ ಪ್ರೇರಣೆ ನೀಡಿ, ಅವಳ ದ್ವಾರಾ ಸಾಧಕಜೀವಿಯಲ್ಲಿ ಜ್ಞಾನವನ್ನು ತುಂಬಬೇಕು. ಆಗ ಮಾತ್ರ ಜೀವಿಯ ಉದ್ಧಾರ. ಈ ಎಲ್ಲವನ್ನೂ ಮನಸಲ್ಲಿಟ್ಟುಕೊಂಡ ಪ್ರಸನ್ನವೇಂಕಟದಾಸರು ಕೀರ್ತನೆಯ ಪ್ರಾರಂಭದಲ್ಲಿರುವ ಪಲ್ಲವಿ, ಅನುಪಲ್ಲವಿಗಳಲ್ಲಿ ಬಿಂಬನನ್ನು ಪ್ರಾರ್ಥಿಸುತ್ತಿರುವರು.

ಬಿಂಬರುಪಿಭಗವಂತನು ಅನುಗ್ರಹೋನ್ಮುಖನಾಗಿ ಎದ್ದಲ್ಲಿ, ನಡೆಯುವ ಮುಂದಿನ ಪರಿಣಾಮಗಳನ್ನು ದಾಸರು ಮೊದಲನೆಯ ಚರಣದಲ್ಲಿ ಸೂಚಿಸಿರುವರು.

**"ಅರುಣ ಮೂಡಣ ವೇರೆ ತ್ವರಿತ ತಮಕುಲಜಾರೆ**
**ಹರಿದವಭ್ರದ ತಾರೆ ತರಣಿಕರ ಬಳಿ ಸಾರೆ.**

**ಸರಸಿಜ ವಿಕಸತೋರೆ ಮರುತ ಪರಿಮಳ ಬೀರೆ ನೆರೆದು**
**ಅಳಿಝೇಂಕರಿಸುತಿರೆ**
**ಹರುಷ ದಿವಿಜಗಣ ಬೀರೆ ಮೊರೆಯುತಿವೆ ಸುರಭೇರಿ**
**ಪರಮಹಂಸರು ಮೇರೆ ಮರೆದು ಸ್ಮರಿಸುತಲೈದಾರೆ**
**ಸರ್ವವೇದ ಘೋಷ ಹರಿಪರವೆನುತ ಲೈದಾರೆ ಕರುಣದಲಿ**
**ನೋಡು ಶೌರೆ"**

"ಏನಂ ಮೋಚಯಾಮಿ – ಇವನನ್ನು ಉದ್ಧರಿಸುತ್ತೇನೆ" ಎಂದು ಬಿಂಬನು ಕರುಣಿಸಿದಲ್ಲಿ ಮಾತ್ರ ಜೀವಿಯ ಹೃದಯವೆಂಬ ಪೂರ್ವದಿಕ್ಕು ಭಕ್ತಿಯಿಂದ ಕೆಂಪೇರುವುದು. ಅಜ್ಞಾನವೆಂಬ ಕತ್ತಲು ತಾನಾಗಿಯೇ ಜಾರಿ ಹೋಗುವುದು. ಅಲ್ಲಿಯವರೆವಿಗೂ ಬುದ್ಧಿಯೆಂಬ ಆಕಾಶದಲ್ಲಿ ವ್ಯಾಪಿಸಿದ್ದ ಸಂಶಯತಾರೆಗಳು ತಾವಾಗಿಯೇ ದೂರಾಗುವವು. ಜ್ಞಾನದ ಕಿರಣಗಳು ವ್ಯಾಪಿಸುವವು. ಹೃದಯಕಮಲ ಅನಿರ್ವಚನೀಯಾನಂದದಿಂದ ವಿಕಸಿಸುವುದು. ವಾಯುಮತದ ಸೌರಭವು ಎಲ್ಲಡೆಯಲ್ಲೂ ಪಸರಿಸುವುದು. ಇಂದ್ರಿಗಳೆಂಬ ದುಂಬಿಗಳು ಭಗವತ್ಪರವಾಗಿ ಝೇಂಕರಿಸುವವು. ತತ್ತ್ವಾಭಿಮಾನಿದೇವತೆಗಳೆಲ್ಲ ಆನಂದದಿಂದ ಸಾಧಕಜೀವಿಯನ್ನು ಆಶೀರ್ವದಿಸುವರು. – ಸಾಧಕಜೀವಿಯ ಮುಖದಿಂದ ಭೇರಿನಿನಾದಗಳಂತೆ "ಹರೇ, ನಾರಾಯಣ, ಮುಕುಂದ" ಎಂಬ ಶಬ್ದಗಳು ಹೊರಹೊಮ್ಮುವವು. ಗುರುಗಳು ಸಂತೋಷದಿಂದ ಹರಸುವರು. ನಿರಂತರ ಬಾಯಿಯಿಂದ ಹರಿಸರ್ವೋತ್ತಮತ್ತ್ವ ಪ್ರತಿಪಾದಕಗಳಾದ ವೇದವಾಣಿಗಳು ನುಡಿಯಲ್ಪಡುವವು. ಇದಕ್ಕಾಗಿ ಬಿಂಬಾಭಿನ್ನನಾದ ಓ ಕೃಷ್ಣಾ ಉಪ್ಪವಡಿಸು. ಏಳು; ನನಗೆ ಕರಾವಲಂಬನೆಯನ್ನು ಕೊಟ್ಟು ಉದ್ಧರಿಸು, ಎಂದು ದಾಸರು ಪ್ರಾರ್ಥಿಸುತ್ತಿರುವರು.

ಇದರಂತೆ ಮುಂದಿನ ಚರಣಗಳು ಸಹ ಆಧ್ಯಾತ್ಮಅರ್ಥದಲ್ಲಿ ತೆರೆದುಕೊಳ್ಳುತ್ತವೆ. ನೋಡುವ ಕಣ್ಣು ನಮ್ಮದಾಗಬೇಕು. ಪ್ರಸನ್ನವೇಂಕಟದಾಸರ ಚರಣಾಬ್ಜಗಳನ್ನು ನಂಬಿ ಮನಮುಟ್ಟಿ ಕೀರ್ತನೆಯನ್ನು ಹಾಡಬೇಕು.

**ತಾರತಮ್ಯ**

ಆಚಾರ್ಯಮಧ್ವರು ಪಂಚಭೇದತಾರತಮ್ಯಕ್ಕೆ ಹೆಚ್ಚು ಒತ್ತುಕೊಟ್ಟಿರುವರು. ಹರಿಸರ್ವೋತ್ತಮತ್ತ್ವ ಜ್ಞಾನವು ಎಷ್ಟು ಅವಶ್ಯಕವೋ, ಪಂಚಭೇದತಾರತಮ್ಯದ ಜ್ಞಾನವು ಸಹ ಅಷ್ಟೇ ಅತ್ಯಾವಶ್ಯಕವಾದುದು. ಆಚಾರ್ಯರು ತಮ್ಮ ತಾತ್ಪರ್ಯನಿರ್ಣಯದಲ್ಲಿ

**ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ತ್ವಂ ಹರೇಸ್ತಥಾ**
**ಏತದ್ವಿನಾ ನಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ**
**ಪಂಚಭೇದಾಶ್ಚ ವಿಜ್ಞೇಯಾಃ ವಿಷ್ಣೋಃ ಸ್ವಾಭೇದಮೇವ ಚ**
**ನಿರ್ದೋಷತ್ವಂ ಗುಣೋದ್ರೇಕಂ ಜ್ಞಾತ್ವಾ ಮುಕ್ತಿಃ ನಚಾನ್ಯಥಾ**

ಎಂದು ಹೇಳಿ ಇದನ್ನು ಸ್ಪಷ್ಟಪಡಿಸಿರುವರು. ಅಣುಭಾಷ್ಯದಲ್ಲೂ ಸಹ "ತದ್ಭಕ್ತಿ ತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ" ಎಂದು ಹೇಳಿ ಮೇಲಿನ ವಿಷಯವನ್ನೇ



ಸಮರ್ಥಿಸಿರುವರು. ಪುರಂದರದಾಸಾದಿ ಎಲ್ಲಾ ಹಿರಿಯ ಹರಿದಾಸರು ಈ ತಾರತಮ್ಯಕ್ಕೆ ಬಹಳ ಒತ್ತು ಕೊಟ್ಟಿರುವರು.

**"ಎಂದೆಂದು ಮುಕುತಿಯ ಬೇಕೆಂಬವರ್ಗೆ**
**ಅಂದದಿ ಜೀವರ ತಾರತಮ್ಯವ ತಿಳಿಪುದು**
**ಗುರುಪುರಂದರವಿಠಲ ಮುಕುತಿಯ ನೀವ"** – (ಗುರುಪುರಂದರದಾಸರು)
**ತಾರತಮ್ಯವೇ ತಿಳಿದು ನಡೆದಾ ವಿಶಿಷ್ಟರಿಗೆ**
**ಪಾರು ಮಾಡುವ ವತ್ಸವಿಜಯವಿಠಲರೇಯ (ವಿಜಯದಾಸರು)**
**ದೇವದೈತ್ಯರ ತಾರತಮ್ಯವ**
**ನೀವಿಧದಿ ತಿಳಿದೆಲ್ಲರೊಳು ಲ**
**ಕ್ಷ್ಮೀವರನೆ ಸರ್ವೋತ್ತಮನು ಎಂದೆಂದು ನಿತ್ಯದಲಿ**
**ಸೇವಿಸುವ ಭಕ್ತರಿಗೊಲಿದು ಸುಖ**
**ವಿವ ಸರ್ವತ್ರದಲಿ ಸುಖಮಯ**
**ಶ್ರೀವಿರಿಂಚಾದ್ಯಮರನುತ ಜಗನ್ನಾಥವಿಠಲನು (ಜಗನ್ನಾಥದಾಸರು)**

ಹೀಗೆ ಹರಿದಾಸರೆಲ್ಲರೂ ಆಚಾರ್ಯಮಧ್ವರು ತೋರಿಕೊಟ್ಟ ತಾರತಮ್ಯಕ್ಕನುಗುಣವಾಗಿ ಕೃತಿಗಳನ್ನು ರಚಿಸಿರುವರು. ಪ್ರಾಚೀನ ಹರಿದಾಸರ ಸಾಹಿತ್ಯವನ್ನು ಪರಿಶೀಲಿಸಿದಾಗ, ಸಂಕ್ಷೇಪ ರೂಪದಲ್ಲಿ ಮೊಟ್ಟ ಮೊದಲು ತಾರತಮ್ಯ ಕೃತಿಗಳನ್ನು ರಚಿಸಿದವರು ಶ್ರೀ ಪುರಂದರದಾಸರು.

**"ಸತತ ಗಣನಾಥಸಿದ್ಧಿಯ ನೀವಕಾರ್ಯದಲಿ"**

.................................................................

**"ಸತ್ಯಂ ಜಗಕಿದು ಪಂಚಭೇದವು ನಿತ್ಯ ಶ್ರೀಗೋವಿಂದನಾ"**

ಪುರಂದರ ದಾಸರ ಈ ಎರಡು ಕೃತಿಗಳು ಸಂಕ್ಷೇಪತಾರತಮ್ಯಕ್ಕೆ ಕೈಗನ್ನಡಿಗಳು.

ಪ್ರಸ್ತುತ ಕಥಾನಾಯಕರಾದ ಪ್ರಸನ್ನವೇಂಕಟದಾಸರು ಸಹ ತಾರತಮ್ಯಕ್ಕಣುಗುಣವಾಗಿ ಅನೇಕ ಕೀರ್ತನೆಗಳನ್ನು ರಚಿಸಿರುವರು. ಪ್ರಕೃತಉಪಲಬ್ಧವಿರುವ ಪ್ರಸನ್ನವೇಂಕಟದಾಸರ ಕೀರ್ತನೆಗಳಲ್ಲಿ ಲಕ್ಷ್ಮೀ, ವಾಯು, ರುದ್ರ, ತುಳಸಿ, ಸುಬ್ರಹ್ಮಣ್ಯ, ಕೃಷ್ಣವೇಣಿಯರಿಗೆ ಸಂಬಂಧಿಸಿದ ಅನೇಕ ಕೀರ್ತನೆಗಳು ದೊರೆಯುತ್ತವೆ. ಈ ಎಲ್ಲಾ ಕೃತಿಗಳಲ್ಲಿ ತಾರತಮ್ಯವು ಎದ್ದು ಕಾಣುತ್ತದೆ.

**ಸದಾಚಾರ**

**– ಮಾನವ ಜನ್ಮದ ಸಾರ್ಥಕತೆ**

"ಮಾನವಜನ್ಮ ದೊಡ್ಡದು ಇದಹಾನಿ ಮಾಡಲಿ ಬೇಡಿ ಹುಚ್ಚಪ್ಪಗಳಿರಾ" ಇದು ಪುರಂದರದಾಸರ ಸಂದೇಶ. ಈ ವಚನ ದ್ವಿದಳಾತ್ಮಕವಾದುದು. ಒಂದು ಮಾನವ ಜನ್ಮದ ಶ್ರೇಷ್ಠತೆಯನ್ನು ಹೇಳಿದರೆ. ಮತ್ತೊಂದು ಅದರ ಸಾಧನದ ಕಡೆಗೆ ಗಮನ ನೀಡಲು ಎಚ್ಚರಿಕೆ ನೀಡುತ್ತಿರುವುದು. ವಿಜ್ಞಾನಿಗಳ ದೃಷ್ಟಿಯಲ್ಲೂ ಮಾನವಶರೀರ ಅತ್ಯಂತ ಬೆಲೆಬಾಳುವದಾಗಿದೆ. ಈ ದೇಹ ಎಷ್ಟುಪೂರ್ವವಾದುದೋ ಅಷ್ಟೇ ಕ್ಷಣಭಂಗುರವೂ ಆಗಿದೆ.

**"ನೀರಬೊಬ್ಬಳೆಯಂತೆ ನಿತ್ಯವಲ್ಲವೊ ಈ ದೇಹ"**

ಕ್ಷಣಭಂಗುರವೆನಿಸಿದ ಸರ್ವೋತ್ಕೃಷ್ಟವಾದ ಈ ಶರೀರವನ್ನು ಸಾರ್ಥಕಗೊಳಿಸಲು ಪ್ರಯತ್ನಿಸಬೇಕು.

**“ಆಹಾರ – ನಿದ್ರಾ – ಭಯ – ಮೈಥುನಾನಿ**
**ಸಾಮಾನ್ಯಮೇತತ್ ಪಶುಭಿರ್ನರಾಣಾಂ”**

ಆಹಾರ – ನಿದ್ರೆ – ಮೈಥುನಗಳು ಪ್ರಾಣಿಕೋಟಿಗೆ ಸಾಮಾನ್ಯವಾದವುಗಳು. ಮಾನವ ಪ್ರಾಣಿಕೋಟಿಯಲ್ಲಿ ಬುದ್ಧಿಜೀವಿಯೆನಿಸಿರುವನು. ಇವನಿಗೆ ಯುಕ್ತಾಯುಕ್ತ ವಿವೇಚನೆಗೆ ಅನುವಾದ ಬುದ್ಧಿಯನ್ನು ಭಗವಂತನು ಕರುಣೆಯಿಂದ ಕರುಣಿಸಿರುವನು. ಕಣ್ಣಿದ್ದು ಹಗಲಲ್ಲಿ ಬಾವಿಗೆ ಬಿದ್ದಂತಾಗಬಾರದು ಜೀವನ. ಸಮಾಜದಲ್ಲಿ ಆದರ್ಶಪ್ರಾಯವಾದ ಜೀವನವನ್ನು ನಡೆಸಿ, ಆತ್ಮೋದ್ಧಾರವನ್ನು ಮಾಡಿಕೊಳ್ಳುತ್ತಾ, ಸಮಾಜಕ್ಕೂ ಮಾರ್ಗದರ್ಶಕನಾಗಿ ಬಾಳಬೇಕಾದುದು ಬುದ್ಧಿಜೀವಿಯಾದ ಮಾನವನ ಕರ್ತವ್ಯ. ಇದಕ್ಕಾಗಿಯೇ ಭಗವಂತನು ಮಾನವ ಶರೀರವನ್ನು ಕಲ್ಪಿಸಿರುವನು. ಅಂತೆಯೇ ಜ್ಞಾನಿಗಳೆಲ್ಲರೂ ಮಾನವ ಶರೀರವನ್ನು ಸಾಧನ ಶರೀರವನ್ನಾಗಿ ಹೇಳಿರುವರು.

ಮನೆಯನ್ನು ಸ್ವಚ್ಛ ಮಾಡಿಕೊಳ್ಳದವನು ಬೀದಿಯನ್ನೂ, ಊರನ್ನೂ ಸ್ವಚ್ಛಗೊಳಿಸಲಾರನು. ಸಮಾಜಕ್ಕೆ ಹಿತಬೋಧೆ ನೀಡಬೇಕಾದಲ್ಲಿ ಮೊಟ್ಟಮೊದಲು ತಾನು ತನ್ನನ್ನು ಪವಿತ್ರಗೊಳಿಸಿಕೊಳ್ಳಬೇಕು. ಸದಾಚಾರ ಸಂಪನ್ನನಾಗಿ ಶುದ್ಧಾತ್ಮನಾಗಬೇಕು. ಇದೇ ಆತ್ಮೋದ್ಧಾರವೆನಿಸಿಕೊಳ್ಳುವುದು.

ಅನಾದಿನಿತ್ಯರೆನಿಸಿದ ಜೀವರು ಅಸೃಜ್ಯಾವಸ್ಥೆಯಲ್ಲಿ ಜಡಸದೃಶರಾಗಿ ಕಾಲಪ್ರವಾಹದಲ್ಲಿ ಸಾಗುತ್ತಾ ಇರುತ್ತಾರೆ. ಸರ್ವತಂತ್ರ ಸ್ವತಂತ್ರನೂ, ಸರ್ವೋತ್ತಮನೂ, ಸರ್ವಜ್ಞ ಶಿಖಾಮಣಿಯೂ ಘಟನಾಘಟನ ಸಮರ್ಥನೂ, ಸೃಷ್ಠಿ – ಸ್ಥಿತಿ – ಲಯ – ನಿಯಮನ – ಜ್ಞಾನ – ಅಜ್ಞಾನ – ಬಂಧ ಮೋಕ್ಷಾದಿಗಳಿಗೆ ಕಾರಣನೂ, ಎಲ್ಲಕ್ಕಿಂತಲೂ ಮಿಗಿಲಾಗಿ ಸ್ನೇಹ – ದ್ವೇಷ – ಉದಾಸೀನತೆಗಳಿಂದ ಅತ್ಯಂತದೂರನಾಗಿ, ಕಡುಕರುಣಾಮಯನಾಗಿರುವ ಭಗವಂತನು, ಅಸೃಜ್ಯಾವಸ್ಥೆಯಲ್ಲಿದ್ದ ಜೀವರಲ್ಲಿ ದಯೆತೋರಿ, ಅವರವರ ಸ್ವರೂಪ ಭುತ ಯೋಗ್ಯತೆಗಳಿಗನುಸರಿಸಿ ಗತಿಗಳನ್ನು ನೀಡುವುದಕ್ಕಾಗಿ ಅವರನ್ನು ಸೃಷ್ಟಿಗೆ ತರುವನು. ಸಾಧನೆಗೆ ಉಪಯುಕ್ತವಾದ ದಶೇಂದ್ರಿಯಗಳಿಂದ ಕೂಡಿದ ಸುಂದರದೇಹವನ್ನು ಕರುಣಿಸುವನು. ಜೀವರ ಸಾಧನೆಗೆ ಅನುವಾದ 24 ತತ್ತ್ವಗಳಿಂದ ಕೂಡಿದ ಬ್ರಹ್ಮಾಂಡವನ್ನು ಸೃಷ್ಟಿಸಿಕೊಡುವನು. ಭಗವಂತನು ಕರುಣಿಸಿ ಕೊಟ್ಟ ಈ ಎಲ್ಲಾ ಸಾಧನಸಾಮಾಗ್ರಿಗಳನ್ನು ಉಪಯೋಗಿಸಿಕೊಂಡು ಜೀವಿಯು ತನ್ನ ಮುಖ್ಯ ಗುರಿಯೆನಿಸಿದ, ತನ್ನನ್ನು ಸೃಷ್ಠಿಗೆ ತಂದ ಅಂತರಾತ್ಮನೆನಿಸಿದ ಪರಬ್ರಹ್ಮನನ್ನು ಕಾಣಲು ಪ್ರಯತ್ನಿಸಬೇಕು.

ಇದಕ್ಕೆ ಎರಡು ಮಾರ್ಗಗಳು. ಒಂದು ಜ್ಞಾನಮಾರ್ಗ ಮತ್ತೊಂದು ಕರ್ಮಮಾರ್ಗ. ಜ್ಞಾನ – ಕರ್ಮ ಮಾರ್ಗಗಳೆರಡೂ ಪರಸ್ಪರ ಸಂಬಂಧವನ್ನು ಹೊಂದಿದವುಗಳು. ಒಂದರಿಂದ ಒಂದನ್ನು ಬೇರ್ಪಡಿಸಲು ಆಗದು. ಜ್ಞಾನರಹಿತವಾದ ಕೇವಲ ಕರ್ಮ ತಾರಕವಲ್ಲ. ಇದರಂತೆ



ಸತ್ಕರ್ಮಾಚರಣೆಯಿಲ್ಲದ ಜ್ಞಾನವು ಸಾಧನೆಗೆ ಅನುವಾಗದು. ಅಪರೋಕ್ಷಾನಂತರದಲ್ಲೂ ಸತ್ಕರ್ಮಾಚರಣೆ ವಿಹಿತವಾಗಿದೆ. ಸ್ವತಃ ಭಗವಂತನೇ ಗೀತೆಯಲ್ಲಿ

**“ನಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷುಲೋಕೇಷ ಕಿಂಚನ**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ”**

“ಅರ್ಜುನಾ! ನನಗೆ ಹೊಂದಬೇಕಾದುದು ಯಾವುದೂ ಇಲ್ಲ. ನಾನು ಆಪ್ತಕಾಮನು; ಆನಂದಸ್ವರೂಪಿ; ಆದಾಗ್ಯೂ ಲೋಕಶಿಕ್ಷಣೆಗಾಗಿ ಸತ್ಕರ್ಮಾಚರಣೆಯಲ್ಲಿ ನಿರತನಾಗಿರುವೆನು” ಎಂದು ಹೇಳಿರುವನು – ಕರ್ಮಭೂಮಿಯೆನಿಸಿದ ಈ ಪವಿತ್ರವಾದ ಭಾರತದೇಶದಲ್ಲಿ ಜನ್ಮಪಡೆದ ಪ್ರತಿವ್ಯಕ್ತಿ ತನಗೆ ಯೋಗ್ಯವಾದ ಸತ್ಕರ್ಮಗಳನ್ನು ಆಚರಿಸಿ ಸದಾಚಾರ ಸಂಪನ್ನನೆನಿಸಿಕೊಳ್ಳಬೇಕು.

ಶ್ರುತಿಗಳಲ್ಲಿ, ಸ್ಮೃತಿಗಳಲ್ಲಿ, ಧರ್ಮಶಾಸ್ತ್ರ ಹಾಗೂ ಪುರಾಣಗಳಲ್ಲಿ ಈ ಸದಾಚಾರದ ವಿವರಣೆ ವಿಶಾಲವಾಗಿದೆ. ಇವುಗಳಲ್ಲಿ ಹೇಳಿದ ಆಚಾರ – ವಿಚಾರಗಳಲ್ಲಿ ಕೆಲವು, ಆ ಆ ಕಾಲಕ್ಕೆ ಸೀಮಿತವಾದರೆ ಕೆಲವು ಸಾರ್ವಕಾಲಿಕವಾಗಿವೆ. ಈ ಎಲ್ಲವುಗಳ ಸಾರಸರ್ವಸ್ವವನ್ನು ತೆಗೆದು ದ್ವೈತಮತ ಪ್ರತಿಷ್ಠಾಪನಾಚಾರ್ಯರಾದ ಆಚಾರ್ಯಮಧ್ವರು ತಮ್ಮ ಸದಾಚಾರಸ್ಮೃತಿಯಲ್ಲಿ ಸಂಕ್ಷೇಪಿಸಿರುವರು. ಆಚಾರ್ಯಮಧ್ವರ ಹೃದಯವನ್ನು ಬಲ್ಲ ನಂತರದ ಜ್ಞಾನಿಗಳು, ಅವುಗಳನ್ನು ಬಿಡಿಬಿಡಿಯಾಗಿ ಬಿಡಿಸಿ ಹೇಳಿ, ಸಾಧನೆಗೆ ಅನುವು ಮಾಡಿಕೊಟ್ಟಿರುವರು. ಆಚಾರ್ಯ ಮಧ್ವರ ವಚನಗಳ ನಿಜಾರ್ಥವನ್ನು ಸಮಾಜಕ್ಕೆ ಪೂರ್ಣವಾಗಿ, ಸ್ಪಷ್ಟವಾಗಿ, ತಿಳಿಯುವ ರೀತಿಯಲ್ಲಿ ತಿಳಿಯ ಹೇಳಿದವರು ಕರ್ನಾಟಕ ಹರಿದಾಸರು. ಹರಿದಾಸರು ತೋರಿದ ಸದಾಚಾರ, ಅವರು ಹೇಳಿದ ಅನುಷ್ಠಾನಪದ್ಧತಿಗಳು, ಇಂದಿನ ಸಮಾಜದಲ್ಲಿ ಲೌಕಿಕ ಜೀವನವನ್ನು ನಡೆಸುವ ಪ್ರತಿವ್ಯಕ್ತಿಗೂ ದಾರಿದೀಪಗಳಾಗಿ ಸುಲಭಸಾಧ್ಯವಾಗಿವೆ.

ಆಚಾರ್ಯರು ಸದಾಚಾರದ ಪ್ರಾರಂಭದಲ್ಲಿ “ಸ್ಮೃತ್ವಾವಿಷ್ಣುಂ” ಎಂದು ಹೇಳಿ, ಮುಂದೆ ಅನುಷ್ಠೆಯಗಳಾದ ಕರ್ಮಗಳ ಪಟ್ಟಿಯನ್ನು ಕೊಡುತ್ತಾ, ಅವುಗಳ ನಿರ್ವಹಣೆಯ ಬಗೆಯನ್ನು ಬಹುಮಾರ್ಮಿಕವಾಗಿ ತಿಳಿಸಿರುವರು. ‘ವಿಷ್ಣು” ಶಬ್ದವನ್ನು ವಿಶಾಲವಾದ ಅರ್ಥದಲ್ಲಿ ಆಚಾರ್ಯರು ಬಳಸಿರುವರು. ಸರ್ವತ್ರ ವ್ಯಾಪ್ತನಾದ ಭಗವಂತನಿಗೆ ವಿಷ್ಣುವೆಂದು ಕರೆಯುವರು. “ಮುಂದೆ ನಾನು ಹೇಳುವ ಪ್ರತಿಕರ್ಮದಲ್ಲಿ ವ್ಯಾಪ್ತನಾದ ಭಗವಂತನನ್ನು ಸ್ಮರಿಸಿ ಕರ್ಮವನ್ನಾಚರಿಸಿರಿ; ಭಗವಂತನ ಸ್ಮರಣೆಯಿಲ್ಲದೆ ಮಾಡಿದ ಕರ್ಮ ವ್ಯರ್ಥ” ಇದು ಆಚಾರ್ಯರ ಸಂದೇಶ. ಇದರ ಸೂಚನೆಗಾಗಿಯೇ ಸದಾಚಾರ ಪ್ರಾರಂಭದಲ್ಲಿ “ಸ್ಮೃತ್ವಾ ವಿಷ್ಣುಂ” ಎಂದು ಹೇಳಿರುವರು. ಇದಕ್ಕೆ ವ್ಯಾಖ್ಯಾನರೂಪದಲ್ಲಿ ತಮ್ಮ ದ್ವಾದಶಸ್ತೋತ್ರದ ಮೂರನೇ ಅಧ್ಯಾಯದಲ್ಲಿ

**“ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ”**
**“ಹರಿಪಾದ ವಿನಮ್ರ ಧಿಯಾಸತತಮ್”**

ಎಂದು ಹೇಳಿರುವರು. ಮಾಡಬೇಕಾದ ಕರ್ಮಗಳಲ್ಲಿ ಭಗವಂತನು ವ್ಯಾಪಿಸಿ ನಿಂತಿರುವನು. ಆ ಕರ್ಮಗಳನ್ನು ಮಾಡುವ ವ್ಯಕ್ತಿಯಲ್ಲಿಯೂ ಶ್ರೀ ಹರಿಯೇ ಬಿಂಬನಾಗಿ ನಿಂತು, ತಾನೇ ಎಲ್ಲವನ್ನು ಮಾಡಿ ಮಾಡಿಸುತ್ತಿರುವನು. ಕಾರಣ ಸರ್ವಕರ್ಮಗಳಲ್ಲಿ ಭಗವಂತನನ್ನು ಧ್ಯಾನಿಸುತ್ತಾ; "ನಾನು ಅಸ್ವತಂತ್ರನು, ಸರ್ವತಂತ್ರಸ್ವತಂತ್ರನಾದ ಭಗವಂತನು ನನ್ನಲ್ಲಿ ನಿಂತು ನನಗೆ ಯೋಗ್ಯವಾದ ಎಲ್ಲಾ ಸತ್ಕರ್ಮಗಳನ್ನು ತಾನು ಮಾಡಿ ಮಾಡಿಸುವನು" ಎಂದು ಚಿಂತಿಸಬೇಕು. ಈ ಎಲ್ಲಾ ಭಾವನೆಗಳನ್ನು "ಹರಿಪಾದ ವಿನಮ್ರಧಿಯಾ" ಎನ್ನುವ ವಾಕ್ಯದಲ್ಲಿ ಮಧ್ವರು ಅಡಗಿಸಿರುವರು.

ಜಗನ್ನಾಥದಾಸರು ಇದನ್ನೇ

**"ಪೊಂದಿಕೊಂಡಿಹ ಸರ್ವರೊಳು ಸಂ –**
**ಬಂಧವಾಗದೆ ಸಕಲ ಕರ್ಮವ –**
**ವರಂದದಲ್ಲಿ ತಾ ಮಾಡಿ ಮಾಡಿಸಿ ತತ್ಫಲಗಳುಣದೆ" (3–26)**

**"ಏನು ಮಾಡುವ ಕರ್ಮಗಳು ಲ**
**ಕ್ಷ್ಮೀನಿವಾಸನಿಗರ್ಪಿಸನು ಸಂ –**
**ಧಾನಪೂರ್ವಕದಿಂದ ಸಂದೇಹಿಸದೆ ದಿನದಿನದಿ " (5–38)**

ಎಂದು ಹೇಳಿ ಆಚಾರ್ಯರ ಮಾತುಗಳನ್ನು ವಿಶದೀಕರೆಸಿರುವರು. ಆದ ಕಾರಣ ಎದ್ದಕ್ಷಣದಿಂದ ಹಿಡಿದು ರಾತ್ರಿ ಮಲಗುವವರೆಗೆ ಮಾಡುವ ಸಕಲಕರ್ಮಗಳಲ್ಲಿ, ಹರಿದಾಸರು ತೋರಿಕೊಟ್ಟ ಪದ್ಧತಿಯಲ್ಲಿ, ಭಗವದ್ರೂಪಗಳನ್ನು ಅರ್ಥಸಹಿತವಾಗಿ ತಿಳಿದು, ಕಾಲದೇಶ ಪರಿಸ್ಥಿತಿಗಳಿಗನುಗುಣವಾಗಿ ಇದ್ದ ಪದಾರ್ಥಗಳನ್ನೇ ಬಳಸಿಕೊಂಡು, ಕರ್ಮಯಜ್ಞವನ್ನಾಚರಿಸಿ ಶುದ್ಧಾಂತಃಕರಣನಾಗಲು ಪ್ರಯತ್ನಿಸಬೇಕು.

ಪ್ರಸನ್ನವೆಂಕಟದಾಸರು ಸದಾಚಾರದ ಬಗ್ಗೆ ಬಹಳ ಒತ್ತು ಕೊಟ್ಟಿರುವರು. ಮಾಡಬೇಕಾದ ಸದಾಚಾರಗಳ ಪಟ್ಟಿಯನ್ನು ನೇರವಾಗಿ ಹೇಳದಿದ್ದರೂ, ವ್ಯಾಳ್ಯವ್ಯಾಳ್ಯಕ್ಕೆ ಮಾಡಬೇಕಾದ ಶೌಚಸ್ನಾನಾದಿಗಳನ್ನು ಭಗವತ್ಸ್ಮರಣೆ ಪೂರ್ವಕವಾಗಿ ಶಾಸ್ತ್ರೀಯ ಪದ್ಧತಿಯಲ್ಲಿ ಮಾಡದವನು. ಮಹಾಪರಾಧಿಯೆಂದೂ, ಸದಾಚಾರತ್ಯಾಗ ತಪ್ಪುಗಳಲ್ಲೆ ಮಹಾತಪ್ಪೆಂದು ಸ್ಪಷ್ಟಪಡಿಸಿರುವರು. ತಮ್ಮ ಅನೇಕಕೃತಿಗಳಲ್ಲಿ ಅವಶ್ಯಮಾಡಲೇಬೇಕಾದ ಸದಾಚಾರ ಸತ್ಕರ್ಮಗಳನ್ನು ಉಲ್ಲೇಖಿಸಿದ್ದಾರೆ.

**"ತಪ್ಪುಗಳೆಲ್ಲ ಪರಿಹರಿಸುವ ನಮ್ಮಪ್ಪನಲ್ಲವೇ ನೀನು**
**ಒಪ್ಪಿದ ಬಳಿಕವಗುಣ ನೋಡದ ತಿಮ್ಮಪ್ಪನಲ್ಲವೇ ನೀನು"**

ಎಂಬ ಈ ಕೀರ್ತನೆಯಲ್ಲಿ ದಾಸಾರ್ಯರು ಉದಯದಿಂದ ರಾತ್ರಿಯವರೆಗೆ ಮಾಡಬೇಕಾದ ಸದಾಚಾರಗಳನ್ನು ವಿವರಿಸಿರುವರು. ಏಳುವಾಗ ನಾರಾಯಣನ ಸ್ಮರಣೆ, ಹರಿಸ್ಮರಣೆಪೂರ್ವಕ ಮೃತ್ತಿಕಾಶೌಚ, ತುಲಸೀಪೂಜೆ, ಗೋಪೂಜೆ, ಸಕಾಲದಲ್ಲಿ ಸೂರ್ಯನಿಗೆ



ಅರ್ಘ್ಯಪ್ರದಾನ, ಶ್ರೀಹರಿಗುಣಜಿಜ್ಞಾಸೆ, ಭಗವದ್‌ಭಕ್ತರ ಆರಾಧನೆ, ಹರಿಪಾದ ಸೇವೆ, ಹರಿಮೂರ್ತಿದರ್ಶನ, ಹರಿಕಥಾಶ್ರವಣ, ನೈವೇದ್ಯಸಮರ್ಪಣೆ, ವೈಶ್ವಾನರಹೋಮ, ಹರಿನಿರ್ಮಾಲ್ಯಗಳ ಸ್ವೀಕಾರ, ಹರಿನಾಮ ಸಂಕೀರ್ತನೆ, ಹರ್ಯರ್ಚನೆ ತೀರ್ಥಕ್ಷೇತ್ರಗಳ ದರ್ಶನ, ಕೊನೆಗೆ ರಾತ್ರಿಯಲ್ಲಿ ಅನುಸಂಧಾನ ಪೂರ್ವಕ ವಾಮಯಜ್ಞಾಚರಣೆ. ಇವು ದಾಸರು ಹೇಳಿದ ಅವಶ್ಯ ಮಾಡಬೇಕಾದ ಸದಾಚಾರಗಳು.

ಈಗಲೋ ಇನ್ನಾವಾಗಲೋ ಈಗಾತ್ರ ಅಸ್ಥಿರವಣ್ಣ" ಎಂಬ ಕೃತಿಯಲ್ಲಿ ದಾಸರು ಸದಾಚಾರಕ್ಕೆ ನೀಡಿದ ಸ್ಥಾನ ಅಪೂರ್ವವಾದುದು. ಆಚಾರಹೀನನನ್ನು ವೇದಗಳೂ, ದೇವತೆಗಳು ಮನ್ನಿಸುವುದಿಲ್ಲ.

"ಆಚಾರ ಪ್ರಥಮೋಧರ್ಮ: ಧರ್ಮಸ್ಯ ಪ್ರಭು: ಅಚ್ಯುತಃ" ಆಚಾರವೆ, ನಿಜವಾದ ಧರ್ಮ; ಶುದ್ಧಧರ್ಮ. ಈ ಧರ್ಮಕ್ಕೆ ಸ್ವಾಮಿ ನಾರಾಯಣ. ಶ್ರುತಿ–ಸ್ಮೃತಿಗಳು ಆಚಾರವನ್ನು ವಿಪುಲವಾಗಿ ವರ್ಣಿಸಿರುವವು. ಆ ಶ್ರುತಿ–ಸ್ಮೃತಿಗಳು ಶ್ರೀಹರಿಯ ಆಜ್ಞಾರೂಪಶಾಸನಗಳು. ಸದಾಚಾರದಿಂದ ವಿಮುಖನಾಗುವುದೆಂದರೆ ಹರಿಯಾಜ್ಞೆಯನ್ನು ಉಲ್ಲಂಘಿಸುವುದೇ ಆಗಿದೆ. ವೇದಗಳ ಪ್ರಧಾನಾಂಶ ಸದಾಚಾರ. ಸದಾಚಾರ ಪ್ರತಿಪಾದಕಗಳಾದ ವೇದಭಾಗಗಳು ವೇದಗಳಿಗೆ ಮುಖ ಸ್ಥಾನೀಯಗಳು. ಇದು ಪ್ರಸನ್ನವೆಂಕಟದಾಸರ ಹೃದಯದ ಮಾತು. ಈ ಎಲ್ಲವನ್ನೂ ದಾಸಾರ್ಯರು.

**ಸಕಲಾಗಮ ವೇದೋಕ್ತ ವಿಚಾರಕ**
**ಮುಖವೆನಿಸುವುದಾಚಾರ । ಆ**
**ಸುಖವೇ ಧರ್ಮದ ಸಾರ ।**
**ಅಖಿಲಕೆ ಪ್ರಭು ಯದವೀರಾ ।**
**ಭುಕುತವತ್ಸಲ ಪ್ರಸನ್ವಂಕಟರಾಯನಾ ।**
**ಸಖವಿಡಿದರೆ ಭವದೂರ ಮನುಜ ॥"**

ಎಂಬ ಈ ಚರಣದಲ್ಲಿ ಸ್ಪಷ್ಟಪಡಿಸಿರುವರು.

### ಭಕ್ತಿಯ ಭವ್ಯಸ್ವರೂಪ

"ಭಕ್ತ ಭಕ್ತಿ ಸುಪಾಶೇನ ಬದ್ಧಸತ್ಪಾದಪಂಕಜಂ" ಎಂಬ ಆದಿತ್ಯಪುರಾಣವಚನದಂತೆ ಭಗವಂತನು ಭಕ್ತನ ಭಕ್ತಿಪಾಶದಿಂದ ಬಂಧಿಸಲ್ಪಟ್ಟ ಪಾದಪದ್ಮಗಳುಳ್ಳವನು. ಭಕ್ತಿಪಾಶದಿಂದ ತನ್ನನ್ನು ಕಟ್ಟಿದ ಭಕ್ತನನ್ನು ಭಗವಂತನು ಎಂದಿಗೂ ಬಿಡುವುದಿಲ್ಲ. ಭಕ್ತನನ್ನು ಭವಪಾಶದಿಂದ ಬಿಡಿಸುವನು. "ವೈಕುಂಠಂ ವಾಪರಿತ್ಯಕ್ಷೆ ನ ಭಕ್ತಾನ್ತ್ಯಕ್ತುಮುತ್ಸಂಹೆ". ಮೇತಿಪ್ರಯಾಹಿ ಮದ್‌ಭಕ್ತಾಃ" ಇವು ಭಗವಂತನೇ ಆಡಿದ ಮಾತುಗಳು. ವೈಕುಂಠವನ್ನಾದರೂ ಬಿಡುತ್ತೇನೆ, ಭಕ್ತನನ್ನು ಮಾತ್ರ ಬಿಡಲಾರೆ. ನನಗೆ ಅತ್ಯಂತಪ್ರಿಯರಾದವರು ನನ್ನ ಭಕ್ತರೆ. ಸ್ವತಃಗೀತಾಚಾರ್ಯನೆ "ಭಕ್ತ್ಯಾತ್ವನನ್ಯಯಾ ಲಭ್ಯಃ ಅಹಮೇವಂ ವಿಧೋರ್ಜುನಾ;" "ಅನನ್ಯವಾದ ಭಕ್ತಿಗೆ ಮಾತ್ರ ನಾನು ದೊರೆಯುತ್ತೇನೆ" ಎಂದು ಹೇಳಿ, ಭಕ್ತಿಗಿರುವ ಪ್ರಾಶಸ್ತ್ಯವನ್ನು ಎತ್ತಿ ತೋರಿರುವನು. ಪ್ರೇಮಪ್ರವಾಹರೂಪವಾದ ಇಂಥಾಭಕ್ತಿ ಒಂಭತ್ತುವಿಧವಾಗಿದೆ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ"**

ಇದನ್ನೆ ಹರಿದಾಸರು.

**ಶ್ರವಣ ಕೀರ್ತನ ವಿಷ್ಣುಸ್ಮರಣ ಪಾದಯುಗ**
**ಸೇವಾರ್ಚನ ದಾಸ್ಯ ವಂದನೆ ಕೋಲೆ**
**ಸೇವಾರ್ಚನ ದಾಸ್ಯ ವಂದನೆ ಸಖ್ಯವಾತ್ಮ–**
**ನಿವೇದನವೆಂಬ ನವಭಕುತಿ ಕೋಲೆ**

ಇಂಥಾ ನವವಿಧಭಕ್ತಿಯನ್ನು ಮಾಡುವ ಭಕ್ತರನ್ನು ಶ್ರೀಹರಿ ತನ್ನ ಭವನದಲ್ಲಿಟ್ಟು ರಕ್ಷಿಸುತ್ತಾನಂತೆ.

**ನವವಿಧ ಭಕುತಿಯ ನೆವದಿಂದ ಹರಿ ತನ್ನ**
**ಭವನದೊಳಗಿಟ್ಟು ಪಾಲಿಪ ಕೋಲೆ**
**ಭಕ್ತವತ್ಸಲನೆಂಬ ಬಿರುದು ಪೊತ್ತುಕೊಂಡು**
**ಭಕ್ತಾಧೀನನೆನಿಪ ಭಗವಂತ ಕೋಲೆ**
**ಭಕ್ತಾಧೀನನೆನಿಪ ಭಗವಂತ ಭಾಗ್ಯನಿಧಿ**
**ಭಕ್ತರನೆಂದೆಂದು ಬಿಡನಯ್ಯ ಕೋಲೆ**

ಭಕ್ತಿ, ಭಗವಂತ ಮತ್ತು ಭಕ್ತರ ಮಧ್ಯದಲ್ಲಿ ಶಾಶ್ವತವಾದ, ಧೃಢವಾದ ನಂಟನ್ನುಂಟು ಮಾಡುತ್ತದೆ. ಈ ನೆಂಟತನದ ರುಚಿಯನ್ನು ಅನುಭವಿಸಿದ ಧನ್ಯಜೀವಿಗಳು ಪ್ರಸನ್ನ ವೆಂಕಟದಾಸರು. ತಮ್ಮ ಅನುಭವಾಮೃತವನ್ನು ಸಕಲ ಸಜ್ಜನರಿಗೆ ಹಂಚುವ ಸದುದ್ದೇಶದಿಂದಲೆ, ದಾಸರು, ನವವಿಧಭಕ್ತಿಗಳ ವೈಭವವನ್ನೂ, ಅವುಗಳ ಅವಶ್ಯಕತೆಯನ್ನೂ ವರ್ಣಿಸುವ ಪ್ರತ್ಯೇಕ ಕೀರ್ತನೆಗಳನ್ನು ರಚಿಸಿರುವರು.

**ಹರಿಕಥಾಶ್ರವಣಸಾಧನವೆ ಮುಕುತಿ ಇದಕೆ**
**ಸರಿ ಧರ್ಮವಿಲ್ಲೆಂದು ಪೇಳ್ವವು ಶ್ರುತಿತತಿ ॥**

ಹರಿಕಥಾಶ್ರವಣವೆ ಮುಕುತಿಗೆ ಮುಖ್ಯಸಾದನವೆಂದು ಹೇಳಿದ ದಾಸರು, ಈ ಕೀರ್ತನೆಯಲ್ಲಿ ಶ್ರವಣಭಕ್ತಿಯ ಮಹಿಮೆಯನ್ನೂ, ಅದರಿಂದ ದೊರೆಯುವ ಫಲವನ್ನೂ, ಇದನ್ನು ಸಾಧಿಸಿ ಸಿದ್ಧಿಪಡೆದವರನ್ನೂ ವಿವರಿಸಿರುವರು. ಮನನಕ್ಕೆ ಮೂಲ ಶ್ರವಣ. ಶ್ರವಣಭಕ್ತಿಯನ್ನು ಸಾಧಿಸಿದ ವ್ಯಕ್ತಿ ಮಾತ್ರ, ಏಕಾಂತದಲ್ಲಿ ಕುಳಿತು ತಾನು ಕೇಳಿದ ವಿಷಯಗಳನ್ನು ಮನನ ಮಾಡಲು ಸಮರ್ಥನಾಗುವನು. ಶ್ರವಣಭಕ್ತಿಯಿಂದಲೇ ಸಕಲಸದ್ಧರ್ಮಗಳ ಸಾಧನೆ ಸಾಧ್ಯವಾಗುವುದು. ಶ್ರವಣದಿಂದ ಪರಮಾತ್ಮನ ಮಹಿಮೆಯು ತಿಳಿದು, ವೈರಾಗ್ಯವು ಸಿದ್ಧಿಸುವುದು. ಇದರಿಂದ ಭಕ್ತಿ; ಅದರಿಂದ ಮುಕ್ತಿ. ಶ್ರವಣಭಕ್ತಿಯಿಂದ ಶೂದ್ರಯೋನಿಯಲ್ಲಿ ಜನಿಸಿದ್ದ ನಾರದರು ಅಪರೋಕ್ಷ ಪಡೆದರು. ಶ್ರವಣಭಕ್ತಿಯಿಂದ ಪರೀಕ್ಷಿತನು ಏಳೇದಿನಗಳಲ್ಲಿ ಭವಬಂಧನಗಳಿಂದ ಮುಕ್ತನಾದನು. ದೇವತೆಗಳು, ಋಷಿಗಳು, ಗಂಧರ್ವರು, ರಾಜರು,



ಮಾನುಷೋತ್ತಮರು, ಈ ಎಲ್ಲ ಸಾತ್ವಿಕಜೀವಿಗಳು ಶ್ರವಣಭಕ್ತಿಯಿಂದಲೇ ಧನ್ಯರಾಗಿ ಸದ್ಗತಿ ಪಡೆದರು.

ಕಲಿಯುಗದಲ್ಲಿ ಯಜ್ಞ–ಯಾಗ–ತಪಸ್ಸು–ಅರ್ಚನಾದಿಗಳಿಂದ ಭಗವದನುಗ್ರಹವನ್ನು ಸಂಪಾದಿಸುವುದು ಅಸಾಧ್ಯ. ವಾತಾವರಣದ ಕಾಲುಷ್ಯ. ಅಧರ್ಮದ ತಾಂಡವನೃತ್ಯ, ಇಂದ್ರಿಯಗಳ ಲೋಲುಪತೆ, ಅಶುದ್ಧ ಆಹಾರ, ಆಸುರೀಭಾವದ ದುರ್ಜನರ ಆಧಿಪತ್ಯ, ಸ್ವಾರ್ಥಪೂರಿತಜೀವನ ಇವುಗಳೇ ಇದಕ್ಕೆ ಕಾರಣ. ಇಂಥಾ ಈ ಕಲಿಯುಗದಲ್ಲಿ ಕೀರ್ತನಭಕ್ತಿಯೊಂದೇ ತಾರಕ. ಇದನ್ನರಿತ ದಾಸರು.

**"ಪುಣ್ಯಮಾರ್ಗವನರಿಯದ ಮೂಢರಿಗೆ**
**ಉನ್ನತ ಕುಟಿಲ ಪಾಮರ ಮನುಜರಿಗೆ**
**ಘನ್ನ ಸಾಧನವಿದೇ ಮತ್ತೊಂದು ಕಾಣೆ**
**ಪುಣ್ಯಶ್ಲೋಕನ ವಾರ್ತೆಕೀರ್ತನೆಯ ಪಠನೆ**

**ಧರ್ಮ ಸುಮಾರ್ಗವರ್ಜಿತ ಕಲಿಯುಗದಿ**
**ನಿರ್ಮಲ ಮನ ಹೊಂದಲೀಸದ ಭವದಿ**
**ಧರ್ಮಪ್ರಭು ಶ್ರೀಹರಿಗುಣ ಕೀರ್ತನೆ**
**ಉಮ್ಮಯದಲಿ ಮಾಡುವುದೇ ಹರಿಪ್ರಾರ್ಥನೆ**
**ಶ್ರೀವಿಷ್ಣುಮಹಿಮೆ ಸಂಕೀರ್ತನೆ, ಸರ್ವದಾ**
**ವಿಸ್ಮೃತಿಯ ನೀಗಿ ಮಾಡಿ ವೈಷ್ಣವರು"**

ಎಂದು ಹೇಳಿ ಕಲಿಯುಗದಲ್ಲಿ ಕೀರ್ತನಭಕ್ತಿಯ ಅವಶ್ಯಕತೆಯನ್ನು ಸ್ಪಷ್ಟಪಡಿಸಿರುವರು. ರಾಮನಾಮವನ್ನು ಸದಾ ಉಚ್ಚರಿಸುವ ಹನುಮಂತ, ನಿರಂತರ ಭಾಗವತ ಗಾನದಲ್ಲೆರತನಾದ ಶುಕಾಚಾರ್ಯ, ಮಹತಿಯನ್ನು ನುಡಿಸುತ್ತಾ ನರಕದಲ್ಲೂ ನಾರಾಯಣನಾಮಸಂಕೀರ್ತನೆಯನ್ನು ಮಾಡಿ, ಪಾಪಿಗಳನ್ನು ಪಾವನ ಮಾಡಿದ ನಾರದ, ಇವರೆಲ್ಲರೂ ಕೀರ್ತನಭಕ್ತಿಗೆ ಪರವಶರಾಗಿ, ಸದಾ ಭಾಗವನ್ನಾಮಸಂಕೀರ್ತನೆಯಿಂದ ಪುಲಕಿತ ಗಾತ್ರರಾಗಿ, ಮುಕ್ತಿ ಪಡೆದ ಮಹಿತಾತ್ಮರು. ಕಲಿಯುಗದಲ್ಲಿ ಕೇಶವನಿಗೆ ಪ್ರಿಯವಾದದ್ದು ಕೀರ್ತನಭಕ್ತಿ

**"ಮಕ್ಕಳಾಡಿಸುವಾಗ ಮಡದಿಯೊ**
**ಳಕ್ಕರದಿ ನಲಿವಾಗ ಹಯ ಪ – ।**
**ಲ್ಲಕ್ಕಿ ಗಜಮೊದಲಾದ ವಾಹನಗಳೇರಿ ಮೆರೆವಾಗ**
**ಬಿಕ್ಕುವಾಗಾಕಳಿಸುತಲಿ ದೇ –**
**ವಕ್ಕಿತನಯನ ಸ್ಮರಿಸುತಿಹ ನರ**
**ಸಿಕ್ಕನೆಮದೂತರಿಗೆ ಆವಾವಲ್ಲಿ ನೋಡಿದರೂ ॥"**

ಇದು ಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರದ ನಾಮಸ್ಮರಣಸಂಧಿಯ ಪ್ರಾರಂಭದಲ್ಲಿ ಹೇಳಿದ ಪದ್ಯ. ಪ್ರಾಯಃ ಜಗನ್ನಾಥದಾಸರಿಗೆ ನಾಮಸ್ಮರಣಸಂಧಿ ರಚನೆಯ ಕೀರ್ತನ ವಿಷಯದಲ್ಲಿ ಪ್ರಸನ್ನವೆಂಕಟದಾಸರ ಭಕ್ತಿಯ ಹಾಡೇ ಸ್ಫೂರ್ತಿನೀಡಿರಲು ಸಾಧ್ಯ.

ವಿಷ್ಣುಸ್ಮರಣೆಯೇ ನಿಜವಾದ ಸಜ್ಜನ ಸಂಗ; ವಿಷ್ಣುಸ್ಮರಣೆಯೇ ಮೋಕ್ಷ; ವಿಷ್ಣುಸ್ಮರಣೆಯೇ ಸದ್ಬುದ್ಧಿ. ಸದಾ ಸ್ಮರಣಭಕ್ತಿಯಲ್ಲಿ ತಲ್ಲೀನನಾದ ಹರನಿಗೆ ಹಾಲಾಹಲ ಶೀತಲವಾಯ್ತು. ಸ್ಮರಣೆಯೇ ದ್ರೌಪದಿಯ ಮಾನಸಂರಕ್ಷಿಸಿತು. ಅಜಾಮಿಳನ ಪಾಪಗಳನ್ನೆಲ್ಲ ಕ್ಷಣಾರ್ಧದಲ್ಲಿ ತರಿದೋಡಿಸಿತು. ಈ ಸ್ಮರಣಭಕ್ತಿಗೆ ಸಮನಾದ ಸಾಧನದ ಬಗೆ ಮತ್ತೊಂದಿಲ್ಲ. ಭೂಪ್ರದಕ್ಷಿಣೆಗಿಂತಲೂ, ಸಕಲ ತೀರ್ಥಯಾತ್ರೆಗಳಿಗಿಂತಲೂ ಮಿಗಿಲಾದುದು ಈ ಸ್ಮರಣ ಭಕ್ತಿ. ಕೀರ್ತನ–ಸ್ಮರಣ–ಆತ್ಮನಿವೇದನಭಕ್ತಿಗಳಿಗೆ ಕಾಲದೇಶಗಳ, ಅವಸ್ಥೆಗಳ ಅವಶ್ಯಕತೆಯಿಲ್ಲ. ಮಲಗಿದಾಗ, ಎದ್ದಾಗ, ಕುಳಿತಾಗ, ಓಡಾಡುವಾಗ, ಮಾತಾಡುವಾಗ, ಕೆಲಸಗಳನ್ನು ಮಾಡುವಾಗ, ಸ್ನಾನ ಮಾಡುವಾಗ, ಉಣ್ಣುವಾಗ, ಹೀಗೆ ಎಲ್ಲ ಅವಸ್ಥೆಗಳಲ್ಲಿ ಮಾಡಲು ಸಾಧ್ಯವಾದವುಗಳು ಕೀರ್ತನ – ಸ್ಮರಣ ಆತ್ಮನಿವೇದನಗಳೆಂಬ ಈ ಮೂರುಭಕ್ತಿಗಳು. ಇದನ್ನು ಮನಗಂಡೇ, ಕರ್ನಾಟಕಸಂಗೀತಪಿತಾಮಹರೂ, ಪ್ರಸನ್ನವೆಂಕಟದಾಸರಿಗೆ ಅತ್ಯಂತಪ್ರಿಯರೂ ಆದ ಪುರಂದರದಾಸರು –

**ಕಲಿಯುಗದಲಿ ಹರಿನಾಮವ ನೆನೆದರೆ**
**ಕುಲಕೋಟಿಗಳುದ್ಧರಿಸುವವೋ ॥ ಪ ॥**
**ಸುಲಭದ ಮುಕುತಿಗೆ ಸುಲಭವೆಂದೆನಿಸುವ**
**ಜಲರುಹನಾಭನ ನೆನೆ ಮನವೇ ॥ ಅ.ಪ ॥**

**ಸ್ನಾನವನರಿಯೆನು ಮೌನವನರಿಯೆನು**
**ಧ್ಯಾನವನರಿಯೆಂನೆಂದೆನ ಬೇಡ**
**ಜಾನಕಿವಲ್ಲಭ ದಶರಥನಂದನ**
**ಗಾನವಿನೋದನ ನೆನೆ ಮನವೇ ॥**

**ಅರ್ಚಿಸಲರಿಯೆನು ಮೆಚ್ಚಿಸಲರಿಯೆನು**
**ತುಚ್ಛನು ನಾನೆಂದೆನ ಬೇಡ**
**ಅಚ್ಯುತಾನಂತ ಗೋವಿಂದ ಮುಕುಂದನ**
**ಇಚ್ಛೆಯಿಂದ ನೀ ನೆನಿ ಮನವೇ ॥**

**ಜಪವೊಂದರಿಯೆನು ತಪವೊಂದರಿಯೆನು**
**ಉಪದೇಶವಿಲ್ಲೆಂದೆನ ಬೇಡ**
**ಅಪಾರಮಹಿಮ ಶ್ರೀಪುರಂದರವಿಠಲನ**
**ಉಪಾಯದಿಂದಲಿ ನೆನಿ ಮನವೇ ॥**

ಎಂದು ಹೇಳಿರುವರು. ಪುರಂದರದಾಸರಿಂದ ಸ್ಫೂರ್ತಿ ಪಡೆದು, ಜಗನ್ನಾಥದಾಸರಂಥಾ ಅನೇಕ ಜ್ಞಾನಿವರೇಣ್ಯರಿಗೆ ಸ್ಫೂರ್ತಿನೀಡಿದ ಪ್ರಸನ್ನವೆಂಕಟದಾಸರು, ಸ್ಮರಣಭಕ್ತಿಯ ಮಹಿಮೆಯನ್ನು ಐದುಚರಣಗಳಿಂದ ಕೂಡಿದ ಕೀರ್ತನೆಯಲ್ಲಿ ವರ್ಣಿಸಿರುವರು.

**ಶ್ರೀವಿಷ್ಣು ಸ್ಮರಣೆಯಿಂ ಸಾಧುಸಂಸರ್ಗ**
**ಶ್ರೀವಿಷ್ಣು ಸ್ಮರಣೆ ಎಂಬುದೇ ಅಪವರ್ಗ**



**ಶ್ರೀವಿಷ್ಣು ಸ್ಮರಣೆಯಲ್ಲಿ ಸದ್ಬುದ್ಧಿದೀರ್ಘ**
**ಶ್ರೀವಿಷ್ಣು ಸ್ಮರಣೆಗೆಚ್ಚರ ಬುಧವರ್ಗ**

ಕೀರ್ತನೆಯ ಈ ಪಲ್ಲವಿಯೇ ಒಂದು ಗ್ರಂಥ. ವೇದಾಂತದ ಅರ್ಥಗಳನ್ನು ಹೊರಚೆಲ್ಲುವ ಗಣಿ. ಪ್ರಯತ್ನ ಓದುವವನದಾಗಬೇಕು. ಸ್ಮರಣ ಭಕ್ತಿಗೆ ದೇಶ–ಕಾಲ–ಜಾತಿ–ಮತ– ಅವಸ್ಥೆಗಳ ನಿಯಮವಿಲ್ಲ ಎನ್ನುವುದನ್ನು ಸೂಚಿಸುವುದಕ್ಕಾಗಿಯೇ ದಾಸರು, ಪಲ್ಲವಿಯ ಪಾದಗಳ ಪ್ರಾರಂಭದಲ್ಲಿ ವಿಷ್ಣುಶಬ್ದವನ್ನು ಬಳಸಿರುವರು. ವಿಷ್ಣು ಎಂದರೆ ಸರ್ವತ್ರವ್ಯಾಪ್ತ ಎಂದು ಅರ್ಥ. ವಿಷ್ಣುವು ದೇಶ ಕಾಲ–ಜಾತಿ–ಮತ–ಅವಸ್ಥೆಗಳಲ್ಲಿ ಪೂರ್ಣವ್ಯಾಪಿಸಿರುತ್ತಾನೆ. ಪರಮಪವಿತ್ರನಾದ ವಿಷ್ಣುವಿನ ವ್ಯಾಪ್ತಿಯಿಂದ ಕೂಡಿದ ಈ ದೇಶಕಾಲಾದಿಗಳೆಲ್ಲವೂ ಸದಾಪವಿತ್ರವಾದವುಗಳೆ. ಭಗವಚ್ಚಿಂತನೆಯಿಂದ ದೂರಾದ ವ್ಯಕ್ತಿಗೆ ಮಾತ್ರ ಕೆಲದೇಶ–ಕಾಲಗಳು ಅಪವಿತ್ರವಾಗಿ, ಕೆಲದೇಶಕಾಲಗಳು ಪವಿತ್ರವಾಗಿ ಗೋಚರಿಸುತ್ತವೆ. ಭಗವಂತನನ್ನು ಸರ್ವತ್ರ ಕಾಣುವ ಭಕ್ತನಿಗೆ ಎಲ್ಲವೂ ಪವಿತ್ರ. ಇದರಿಂದಾಗಿಯೇ ನಿಜವಾದ ಭಕ್ತನು ಎಲ್ಲೆಡೆಯಲ್ಲೂ, ಎಲ್ಲ ಕಾಲಗಳಲ್ಲೂ, ಎಲ್ಲಾ ಅವಸ್ಥೆಗಳಲ್ಲೂ ವ್ಯಾಪಿಸಿದ ವಿಷ್ಣುವನ್ನು ಸದಾ ಸ್ಮರಿಸುತ್ತಾನೆ. ಆನಂದವನ್ನನುಭವಿಸುತ್ತಾನೆ. ಸಾಧುಗಳಿಗೆ ಸಾಧುತ್ವವನ್ನು ಕರುಣಿಸುವ ನಿಜವಾದ ಸಾಧುವೆನಿಸಿದ ವಿಷ್ಣುವನ್ನು ಸದಾ ಸ್ಮರಿಸುವ ವ್ಯಕ್ತಿ, ಸದಾ ಸಾಧುಸಂಗದಲ್ಲಿದ್ದವನೇ ಆಗುವನು. ಸ್ಮರಣಭಕ್ತಿಯಿಂದ ಕೂಡಿದ ವ್ಯಕ್ತಿಯಲ್ಲಿ, ಬುದ್ಧಿ–ಮನಸ್ಸುಗಳಲ್ಲಿ ಭಗವಂತ ಸದಾ ಸನ್ನಿಹಿತನಾಗಿರುವುದರಿಂದ, ಅವನಿಗೆ ಕೈವಲ್ಯಕರಗತ. ಇಂಥಾ ವ್ಯಕ್ತಿಗೆ ಪ್ರೇರಕವಾಗಿ, ಅವನ ದೇಹದಲ್ಲಿ ವಾಸಿಸುವ ತತ್ವಾಭಿಮಾನಿ ದೇವತೆಗಳೆಲ್ಲರೂ, ಸದಾ ಅನುಗ್ರಹೋನ್ಮುಖರಾಗಿ ಎಚ್ಚರದಿಂದಿದ್ದು ಅವನಿಗೆ ರಕ್ಷಕರಾಗಿರುತ್ತಾರೆ.

**"ಸ್ವಪ್ರಯೋಜನ ಹೀನೋಪಿ ಮಾಯಯಾ ಬಹುರೂಪವಾನ"**

ಭಗವಂತನಿಗೆ ಹೊಂದಬೇಕಾದ ಯಾವ ಪ್ರಯೋಜನವಿಲ್ಲ. ಅವನು ಪೂರ್ಣಕಾಮನು ಜ್ಞಾನಾನಂದಸ್ವರೂಪಿ. ಆದಾಗ್ಯೂ ಜೀವನ ಉದ್ಧಾರಕ್ಕಾಗಿ ಸ್ವೇಚ್ಛೆಯಿಂದ ಅನಂತ ರೂಪಗಳನ್ನು ಧರಿಸಿರುವವನು. ಇಂಥಾಪ್ರಭುವಿಗೆ ದೇಶಕಾಲಗಳಿಂದ ಸಮಳಾದ ಮಹಾಲಕ್ಷ್ಮಿಯು ಸ್ವಾಮಿಯ ಆ ಸೇವೆಗಾಗಿ ತಾನೂ ಅನಂತರೂಪಗಳನ್ನು ಧರಿಸುವಳು"

**"ಆವಾವ ದೇಶದಿ ಆವಾವ ಕಾಲದಿ**
**ಆವಾವ ರೂಪ ಧರಿಸಿದ ಹರಿಮನೋ**
**ಭಾವವ ತಿಳಿದು ಉದಿಸೋಳು ಕೋಲೆ"**

ಲಕ್ಷ್ಮಿಯ ಅನಂತರೂಪಗಳಲ್ಲಿ ಒಂದು ರೂಪ, ಅನಾದ್ಯನಂತಕಾಲಗಳಿಂದ ಶ್ರೀಹರಿಯ ಪಾದಸೇವೆಯನ್ನು ಮಾಡುತ್ತಾ, ಆನಂದವನ್ನನುಭವಿಸುತ್ತಿರುವುದು. ಆರೂಪ ಶ್ರೀಹರಿಯ ಪಾದಸೇವಾಭಕ್ತಿಯ ಪ್ರಾಶಸ್ತ್ಯವನ್ನೂ, ಅದರ ಸವಿಯನ್ನೂ, ಅದರ ವೈಭವವನ್ನೂ, ಸಾರುತ್ತಿರುವುದು. ಗಂಗಾದೇವಿಯು ಸಹ ತ್ರಿವಿಕ್ರಮರೂಪಿಭಗವಂತನ ಪಾದಗಳನ್ನು ತೊಳೆದು, ಪಾದಸೇವಾಭಕ್ತಿಯ ಸವಿಯನ್ನನುಭವಸಿರುವಳು. ಇಂಥಾ ಪಾದಸೇವಾರೂಪ ಭಕ್ತಿಯನ್ನು ಪ್ರಸನ್ನವೆಂಕಟದಾಸರು.

**“ಶ್ರೀರಮಣನ ಪಾದಸೇವನ ಮಾಡಿ ಬುಧರು**
**ಈರ ಮತದವರನುದಿನ**
**ಮಹಾಲಕುಮಿ ಪಾದಸರೋ–ರುಹದ್ವಯವ ತೋಳಲಪ್ಪಿ**
**ಸ್ನೇಹವಾರ್ಧಿಯಲಿ ಮುಳುಗಿ – ಗಹನದಿ ಭಜಿಸುತಲಿಪ್ಪ” ॥**

– ಎಂಬ ಈ ಕೀರ್ತನೆಯಲ್ಲಿ ಮನತುಂಬಿ ವರ್ಣಿಸಿರುವರು.

**ಅರ್ಚನೆ ಮಾಡಿರಯ್ಯ ಶ್ರೀಭಗವ**
**ದರ್ಚನೆ ಮಾಡಿರಯ್ಯ**
**ಅರ್ಚನೆ ಮಾಡುವ ಅರ್ಚಕ ಬುಧರಿಗೆ**
**ಅರ್ಚಿಪ ಪದದಲಿ ಅಚ್ಯುತ ದೊರೆವನೆಂದು**

– ಎಂಬ ಈ ಕೀರ್ತನೆಯಿಂದ ಅರ್ಚನ ಭಕ್ತಿಯನ್ನೂ,

**“ವಂದಿಸಿದರೆ ವಂದ್ಯರು ಪೂಜಿತರು ಮು–**
**ಕುಂದ ಗೋವಿಂದ ಶ್ರೀಹರಿಯನ್ನು**
**ಎಂದೆಂದು ಕುಂದದಾನಂದವೈದಿಸುವ**
**ಇಂದಿರೆಯರಸ ಭವಬಂಧ ಮೋಚಕನ”**

– ಎಂಬ ಕೀರ್ತನೆಯಿಂದ ವಂದನಭಕ್ತಿಯನ್ನೂ

**“ಸಖ್ಯವಿರಬೇಕು ಹರಿಭಕ್ತಜನಕೆ**
**ಮುಕ್ತಿದಾಯಕ ಪಾರ್ಥಸಖನ ಪಾದಾಬ್ಜದಲಿ”**

– ಎಂಬ ಕೀರ್ತನೆಯಿಂದ ಸಖ್ಯಭಕ್ತಿಯನ್ನು

**“ಆತ್ಮನಿವೇದನ ಭಕುತಿ ತನ್ನಾತ್ಮನೀವ ಪರಮಾತ್ಮ ವಿಶ್ವಾತ್ಮಗೆ”**

– ಎಂಬ ಕೀರ್ತನೆಯಿಂದ ಆತ್ಮನಿವೇದನ ಭಕ್ತಿಯನ್ನೂ ಹೃದ್ಯವಾಗಿ ವಿವರಣ ಪೂರ್ವಕವಾಗಿ ವರ್ಣಿಸಿರುವರು. ಪ್ರಸನ್ನವೆಂಕಟರಿಗಿಂತ ಪೂರ್ವಜರೆನಿಸಿದ ಶ್ರೀಪಾದರಾಜರ, ವ್ಯಾಸರಾಜರ, ವಾದಿರಾಜರ, ಪುರಂದರದಾಸರ, ಕನಕದಾಸರ ಸಾಹಿತ್ಯದಲ್ಲಾಗಲಿ, ಪ್ರಸನ್ನವೆಂಟಕರ ನಂತರ ಬಂದ ವಿಜಯ–ಗೋಪಾಲ–ಜಗನ್ನಾಥದಾಸರಂಥ ಪ್ರಸಿದ್ಧ ದಾಸರ ಸಾಹಿತ್ಯದಲ್ಲಾಗಲಿ, ಪ್ರತ್ಯೇಕ ಪ್ರತ್ಯೇಕ ಕೀರ್ತನೆಗಳಲ್ಲಿ ನವವಿಧಭಕ್ತಿಗಳ ವರ್ಣನೆಯು ಕಂಡು ಬರುವುದಿಲ್ಲ. ನವವಿಧಭಕ್ತಿಗಳ ವರ್ಣನ ಕೊಡುಗೆ ಪ್ರಸನ್ನವೆಂಕಟದಾಸರಿಗೆ ಮೀಸಲಾದದ್ದು. ಇಷ್ಟು ಮಾತ್ರವಲ್ಲದೆ ದಾಸರು ಈ ನವವಿಧ ಭಕ್ತಿಗಳ ಸ್ವರೂಪ – ಅನುಷ್ಠಾನಪದ್ಧತಿ – ಫಲಗಳನ್ನು ಒಂಭತ್ತುಉಗಾಭೋಗಗಳಲ್ಲಿ ಬೇರೆ ಬೇರೆಯಾಗಿ ವರ್ಣಿಸಿರುವರು.

**ವೇದಾಂತ ಪರಿಜ್ಞಾನ**

ಪ್ರಸನ್ನವೆಂಕಟದಾಸರ ಕೀರ್ತನೆಗಳಲ್ಲಿ ಪ್ರಾರ್ಥನೆ, ಸ್ತೋತ್ರ, ಲೋಕನೀತಿ, ಉಪಾಸನೆ, ಸಾಧನೆ, ಇವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಕಾಣಬಹುದು. ಆದರೆ ಅವರ ಎಲ್ಲಾ



ಕೃತಿಗಳಲ್ಲಿ ಸಮಾನವಾಗಿ ಕಾಣುವ ವಿಷಯವೆಂದರೆ ಅವರು ನಂಬಿದ ಆಚಾರ್ಯಮಧ್ವರ ಸಿದ್ಧಾಂತಪ್ರಮೇಯಗಳು.

ದಾಸರ ದ್ವೈತದೀಕ್ಷೆ ಅಪೂರ್ವವಾದುದು. ಪ್ರತಿಕೃತಿಯಲ್ಲಿ ವಾಚ್ಯವಾಗಿ ದ್ವೈತಪ್ರಮೇಯ ಗಳನ್ನು ಹೇಳುವುದರೊಟ್ಟಿಗೆ, ಧ್ವನ್ಯರ್ಥದಲ್ಲೂ ಆ ಪ್ರಮೇಯಗಳನ್ನು ತಿಳಿಯ ಹೇಳುತ್ತಾರೆ. ಇದು ಹರಿದಾಸಸಾಹಿತ್ಯದ ವೈಶಿಷ್ಟ್ಯ. ದಾಸರು ವಾಸದೇವರೂಪಿ ಭಗವಂತನ ಸ್ತೋತ್ರಾತ್ಮಕವಾದ ಒಂದು ಚಿಕ್ಕ ಕೀರ್ತನೆಯನ್ನು ರಚಿಸಿರುವರು. ಅದರ ಸ್ವರೂಪ ಕೆಳಕಂಡಂತೆ ಇದೆ.

**ವಾಸದೇವ ವಾಸುದೇವ**
**ವಾಸವ ಹರ ವಿಧಿಪತಿ ವಾಸುದೇವ**

**ಅಖಿಳ ಜಗದಂತರ್ಬಹಿ ವಾಸುದೇವ**
**ಭಕುತ ಹೃದಯಮಂದಿರ ವಾಸುದೇವ ॥ ೧ ॥**

**ವೈಕುಂಠ ಕ್ಷೀರಸಾಗರ ವಾಸುದೇವ**
**ಶ್ರೀಕರಾನಂತಾಸನ, ವಾಸುದೇವ ॥ ೨ ॥**

**ಸ್ವಾಮಿಪುಷ್ಕರಕೂಲಸ್ಥಿರ ವಾಸುದೇವ**
**ಸ್ವಾಮಿಪ್ರಸನ್ವೆಂಕಟ ವಾಸುದೇವ ॥ ೩ ॥**

ಕೀರ್ತನೆ ಬಹಳ ಚಿಕ್ಕದು. ಬಳಸಿದ ಶಬ್ದಗಳು ಹದಿನೆಂಟು ಮಾತ್ರ. ಇದರಲ್ಲಿ ವಾಸುದೇವ ಶಬ್ದವನ್ನು ಒಂಭತ್ತು ಬಾರಿ ಪ್ರಯೋಗಿಸಿರುವರು. ಉಳಿದವುಗಳು ಒಂಭತ್ತು. ಅವು –

(೧) ವಾಸವಹರವಿಧಿಪತಿ, (೨) ಅಖಿಳಜಗದಂತರ್ಬಹಿ, (೩) ಭಕುತಹೃದಯ ಮಂದಿರ (೪) ವೈಕುಂಠ (೫) ಕ್ಷೀರಸಾಗರ (೬) ಶ್ರೀಕರಾನಂತಾಸನ (೭) ಸ್ವಾಮಿ ಪುಷ್ಕರಕೂಲ (೮) ಸ್ವಾಮಿ (೯) ಪ್ರಸನ್ವೆಂಕಟ

ಸಂಖ್ಯಾಶಾಸ್ತ್ರವು ಭಾರತೀಯರ ಒಂದು ಅಪೂರ್ವಕೊಡುಗೆ. ಸಂಖೆಗಳ ದ್ವಾರಾ ವೇದಾಂತಪ್ರಮೇಯಗಳನ್ನೂ, ಅನೇಕರಹಸ್ಯಾರ್ಥಗಳನ್ನೂ ತಿಳಿಸುವುದು, ನಮ್ಮ ಪ್ರಾಚೀನಗ್ರಂಥಕರ್ತೃಗಳ ಲಕ್ಷಣ. ಸಂಖ್ಯೆಯಲ್ಲಿ ಅಸಂಖ್ಯಾರ್ಥಗಳನ್ನು ಕಾಣುವುದೆಂದರೆ ಇದೇ. ಉದಾಹರಣೆಗೆ ನೋಡುವುದಾದರೆ ಮಹಾಭಾರತವು ೧೮ ರಿಂದ ಬಿಗಿಯಲ್ಪಟ್ಟಿದೆ. ರಾಮಾಯಣಕ್ಕೆ ೭ರ ನಂಟು ಹೆಚ್ಚು. ಭಾರತದಲ್ಲಿರುವ ಪರ್ವಗಳು ೧೮; ಭಾರತಯುದ್ಧವು ನಡೆದದ್ದು ೧೮ದಿನಗಳಲ್ಲಿ; ಯುದ್ಧದಲ್ಲಿ ಭಾಗವಹಿಸಿದ ಸೈನ್ಯಸಂಖ್ಯೆ ೧೮ ಅಕ್ಷೌಹಿಣಿ; ಭಗವದ್ಗೀತೆಯಲ್ಲಿರುವ ಅಧ್ಯಾಯಗಳು ೧೮. ಈ ಹದಿನೆಂಟರ ಮರ್ಮ ವಿಶಿಷ್ಟವಾದುದು. ೧೮ ಎನ್ನುವ ಪೂರ್ಣಸಂಖ್ಯೆಯಲ್ಲಿ ಒಂದು (೧) ಮತ್ತು ಎಂಟು (೮) ಎನ್ನುವ ಎರಡು ಸಂಖ್ಯೆಗಳಿವೆ. ಇವುಗಳನ್ನು ಕೂಡಿಸಿದರೆ (1+8=9) 9 ಸಂಖ್ಯೆ ದೊರೆಯುವುದು. ಈ 9 ಭಾರತೀಯರಿಗೆ ಪವಿತ್ರವಾದ ಸಂಖ್ಯೆ. ಈ 9ರಲ್ಲೆ ಭಾರತೀಯರ ಆಧ್ಯಾತ್ಮವೆಲ್ಲವೂ ಅಡಗಿದೆ. ಕಾಲವಿಭಾಗದಲ್ಲಿ ಸೇರಿದ ಕೃತ – ತ್ರೇತಾ–ದ್ವಾಪರ – ಕಲಿಯುಗಗಳ ಆಯುಃಪ್ರಮಾಣಗಳನ್ನು ಗುಣಿಸಿದರೆ ಬರುವ ಸಂಖ್ಯೆ ಒಂಭತ್ತು.

ಕೃತಯುಗದ ಆಯುಃಪ್ರಮಾಣ 17,28,000 ವರ್ಷಗಳು. ಈ ಸಂಖ್ಯೆಗಳನ್ನು ಕ್ರಮವಾಗಿ ಗುಣಿಸಿದಲ್ಲಿ (1+7+2+8+000+=18=1+8=9) ಕೊನೆಗೆ 9 ಬರುವುದು. ಇದರಿಂತೆ ಉಳಿದ ಎಲ್ಲಾ ಯುಗಗಳು

ತ್ರೇತಾಯುಗ = 12,96,000 = 1+2+9+6+0+0+0 = 18 = 1+8 = 9

ದ್ವಾಪರಯುಗ = 8,64,000 = 8+6+4+0+0+0 = 18 = 1+8 = 9

ಕಲಿಯುಗ = 4,32,000 = 4+3+2+0+0+0 = 9

ಈ ನಾಲ್ಕು ಯುಗಗಳು ಕಾಲಚಕ್ರದಲ್ಲಿ ಒಮ್ಮೆ ತಿರುಗಿದರೆ, ಅದಕ್ಕೆ ಒಂದು ಮಹಾಯುಗವೆಂದು ಹೆಸರು. ಮಹಾಯುಗದ ಆಯುಃ ಪ್ರಮಾಣ 43,20,000 ಇದನ್ನು ಹಿಂದಿನಂತೆ ಸೇರಿಸಿದಲ್ಲಿ (4+3+2+0+0+0+=9) ಒಂಭತ್ತೇಬರುತ್ತದೆ. 71 ಮಹಾಯುಗಗಳ ಕಾಲವೇ ಒಬ್ಬಮನುವಿನ ಜೀವಿತವಾಗುವುದು. ಒಂದು ಮಹಾಯುಗದ ಆಯುಃಪ್ರಮಾಣ 4320,000. 71 ಮಹಾಯುಗಗಳ ಆಯುಃಪ್ರಮಾಣ(43,20,00 x 71 = 30,67,20,000) 30 ಕೋಟಿ 67 ಲಕ್ಷ 20 ಸಾವಿರ ವರ್ಷಗಳಾವವು. ಈ ಸಂಖ್ಯೆಗಳನ್ನು ಹಿಂದಿನಂತೆ ಕೂಡಿಸಿದಲ್ಲಿ 9 ಬರುವುದು.

ಇನ್ನು ಪ್ರತಿಮಾನವ ಒಂದು ದಿನಕ್ಕೆ 21,600 ಬಾರಿ ಶ್ವಾಶೋಚ್ಛ್ವಾಸ ಕ್ರಿಯೆಯನ್ನು ಮಾಡುವನು. ಇವನ್ನು ಕೂಡಿಸಿದರೂ 9 ಬರುವುದು. ಮಾನವನ ದೇಹದಲ್ಲಿ ಇರುವ ಒಟ್ಟು ನಾಡಿಗಳ ಸಂಖ್ಯೆ 72,000. ಇವುಗಳಿಂದಲೂ ಒಂಭತ್ತೇ ಬರುವುದು. ಇದರಂತೆ ವರ್ಷಕ್ಕೆ ದಿನಗಳು 360. (9). ನಕ್ಷತ್ರಗಳು 27 (9).

ಸಂಖ್ಯಾಶಾಸ್ತ್ರದ ಸೌಂದರ್ಯಕ್ಕೆ ಮನಸೋತ ಪ್ರಸನ್ವೇಂಕಟದಾಸರು ಸಹ, ಈ ಕೀರ್ತನೆಯಲ್ಲಿ ಸಂಖ್ಯೆಯಿಂದ ಚಮತ್ಕಾರ ಮಾಡಲು, ಅದರಿಂದ ಅಪೂರ್ವವೇದಾಂತ ರಹಸ್ಯಗಳನ್ನು ಪ್ರಕಟಿಸಲು, 18 ಎಂಬ ಸಂಖ್ಯೆಯನ್ನು ಬಳಸಿರುವರು. ಕೀರ್ತನೆಯಲ್ಲಿ ಒಟ್ಟು ಬಳಸಿದ ಶಬ್ದಗಳ ಸಂಖ್ಯೆ 18 ಎಂಬುದನ್ನು ಈಗಾಗಲೇ ತಿಳಿದಿದ್ದೇವೆ. ದಾಸರಿಂದ ಹೆಚ್ಚು ಬಾರಿ ಬಳಸಲ್ಪಟ್ಟ ವಾಸುದೇವಶಬ್ದವು ಸಹ 18ರ ನಂಟನ್ನು ಹೊಂದಿದೆ. ವಾಸುದೇವ ಶಬ್ದದಲ್ಲಿ ಒಟ್ಟು 4 ಅಕ್ಷರಗಳು. ಈ ಅಕ್ಷರಗಳು ಸಂಖ್ಯಾಶಾಸ್ತ್ರದ ನಿಯಮದ ಪ್ರಕಾರ ಕೆಲಸಂಖ್ಯೆಗಳಿಗೆ ಸೂಚಕಗಳಾಗಿವೆ. ವಕಾರವು (ವಾ), ಯ–ರ–ಲ–ವ–ಶ–ಷ–ಸ–ಹ–ಳ ಅಕ್ಷರಗಳಲ್ಲಿ 4ನೆಯ ಅಕ್ಷರ. ವಾ ಅಕ್ಷರದಿಂದ 4 ಎಂಬ ಸಂಖ್ಯೆ ಪ್ರಕಟವಾಯಿತು. ಇದರಂತೆ ಎರಡನೆಯದಾದ 'ಸು' ಅಕ್ಷರದಿಂದ 7ರ ಸಂಖ್ಯೆಯು ದೊರೆಯುವುದು. ಮೂರನೆಯದಾದ ದೇ ಕಾರವು ತವರ್ಗದಲ್ಲಿ 3ನೆಯ ಅಕ್ಷರ. ಇದರಿಂದ ಮೂರು ಎಂಬ ಸಂಖ್ಯೆಯು, ಕೊನೆಯದಾದ ವ ಅಕ್ಷರದಿಂದ ಪುನಃ 4 ಎಂಬ ಸಂಖ್ಯೆ ಸಿದ್ಧಿಸುವುದು. ಆಗ ವಾಸುದೇವ ಶಬ್ದದಿಂದ ಕ್ರಮವಾಗಿ 4,7,3,4 ಸಂಖ್ಯೆಗಳು ಪ್ರಕಟವಾಗುವವು. ಇವುಗಳನ್ನು ಒಪ್ಪಿಕೂಡಿಸಿದಲ್ಲಿ (4+7+3+4) 18 ಎಂಬ ಪೂರ್ಣ ಸಂಖ್ಯೆಯು ಉಪಲಬ್ದವಾಗುವುದು.

ಒಟ್ಟಿನಲ್ಲಿ ಈ ಕೃತಿಯಲ್ಲಿ ಬಳಸಿರುವ ಶಬ್ದಗಳಿಂದಲೂ, ವಾಸುದೇವ ಶಬ್ದದಿಂದಲೂ 18 ಎನ್ನುವ ಸಂಖ್ಯೆಯು ವ್ಯಕ್ತವಾಗುತ್ತಿರುವುದು. ಈ 18 ಎಂಬ ಸಂಖ್ಯೆಯು ಮೂರು ವಿಧದಲ್ಲಿ ತನ್ನನ್ನು ತಾನು ಪ್ರಕಟಗೊಳಿಸುವುದು. ಈ 18ರಲ್ಲಿ 1 ಮತ್ತು 8 ಎಂಬ ಎರಡು ಸಂಖ್ಯೆಗಳಿವೆ. ಈ ಎರಡನ್ನು ಕೂಡಿಸಿದಲ್ಲಿ (1+8) 9 ಎಂಬ ಹೊಸ ಸಂಖ್ಯೆಯು ವ್ಯಕ್ತವಾಗುವುದು. ಹೀಗೆ 18, 1, 8, 9 ಎಂಬ ಸಂಖ್ಯೆಗಳು ಒಂದು ವಿಶಿಷ್ಟವಾದ ವೇದಾಂತದ ರಹಸ್ಯವನ್ನು ಸೂಚಿಸುತ್ತಿರುವವು. ವೇದಗಳಿಗೆಲ್ಲಾ ಮಾತೃಸ್ಥಾನೀಯವಾದುದು ಪುರುಷಸೂಕ್ತ. ಈ ಸೂಕ್ತ 18 ಋಕ್ಕುಗಳಿಂದ ಕೂಡಿದೆ. ಇದು ಎಲ್ಲ ವೇದಗಳ ಪ್ರತಿನಿಧಿ. ಶ್ರಿಮತಾಚಾರ್ಯರಿಂದ ವ್ಯಾಖ್ಯಾನಿಸಲ್ಪಟ್ಟ ಪ್ರಸಿದ್ಧವಾದ ಉಪನಿಷತ್ತುಗಳು ಹತ್ತು. ಈ ಹತ್ತುಉಪನಿಷತ್ತು 10 ಉಪನಿಷತ್ತುಗಳಲ್ಲಿ ಒಂದಾದ ಈಶಾವಾಸ್ಯೋಪನಿಷತ್ತು 18 ಮಂತ್ರಗಳಿಂದ ಕೂಡಿದೆ. ಈ ಈಶಾವಾಸ್ಯೋಪನಿಷತ್ತುಗಳಿಗೆ ಸೂಚಕ. 18 ಪುರಾಣಗಳಲ್ಲಿ ಸರ್ವರಿಂದಲೂ ಮಾನ್ಯವಾಗಿ, ಪಾರಾಯಣ, ಪ್ರವಚನಗಳ ದ್ವಾರಾ ಪ್ರಸಿದ್ಧವಾದ ಪುರಾಣರಾಜ ಭಾಗವತ. ಇದು 18,000 ಶ್ಲೋಕಗಳಿಂದ ಕೂಡಿದೆ. ಭಾಗವತ ಎಲ್ಲ ಪುರಾಣಗಳಿಗೆ ಪ್ರತಿನಿಧಿ, 18ರ ಸಂಖ್ಯೆಯಿಂದ ವ್ಯಕ್ತಳಾದ ಎಲ್ಲ ವೇದಗಳಿಂದಲೂ, ಎಲ್ಲ ಉಪನಿಷತ್ತುಗಳಿಂದಲೂ, ಎಲ್ಲ ಪುರಾಣಗಳಿಂದಲೂ ಪ್ರಧಾನವಾಗಿ, ಸರ್ವೋತ್ತಮನಾಗಿ ತಿಳಿಯಲ್ಪಡುವ ಏಕಮೇವಾದ್ವಿತೀಯ ಬ್ರಹ್ಮ ಒಬ್ಬನೇ. ಅವನೇ ವಾಸುದೇವ. ಅವನು ಸೃಷ್ಟಿ – ಸ್ಥಿತಿ – ಲಯ – ನಿಯಮನ – ಜ್ಞಾನ – ಅಜ್ಞಾನ – ಬಂಧ – ಮೋಕ್ಷಗಳೆಂಬ ಅಷ್ಟಕರ್ತೃತ್ವಉಳ್ಳವನು. (8) ವೇದೋಪನಿಷತ್ಪುರಾಣಗಳಿಂದ ಸರ್ವೋತ್ತಮನಾಗಿ, ಅದ್ವಿತೀಯನಾಗಿ ತಿಳಿಯಲ್ಪಡುವ, ಅಷ್ಟಕರ್ತೃತ್ವಗಳೆಂಬ ಅಗಮ್ಯ ಮಹಿಮೆಗಳಿಂದ ಕೂಡಿದ ವಾಸುದೇವನು, ನವವಿಧಭಕ್ತಿಗಳಿಗೆ ಮಾತ್ರ ದೊರೆಯುವವನು. 'ಅಮಲಾ ಭಕ್ತಿಶ್ಚತತ್ಸಾಧನಂ' ಶುದ್ಧವಾದ ಭಕ್ತಿ ಮಾತ್ರ ಭಗವತ್ಪ್ರಾಪ್ತಿಗೆ ಪ್ರಧಾನ ಸಾಧನ. ಅಪೂರ್ವವೂ, ಅತ್ಯಂತ ಅವಶ್ಯಕವೂ ಆದ ಈ ಪ್ರಮೇಯವು 18 ಎಂಬ ಸಂಖ್ಯೆಯಿಂದ ಧ್ವನಿತವಾಗುವುದು. ಪ್ರತಿಪದಾರ್ಥದಲೂ, ಪ್ರತಿವ್ಯಕ್ತಿಯಲ್ಲೂ, ಪ್ರತಿಶಬ್ದದಲ್ಲೂ, ಪ್ರತ್ಯಕ್ಷರದಲ್ಲೂ, ಕೊನೆಗೆ ಪ್ರತಿಸಂಖ್ಯೆಯಲ್ಲೂ ಭಗವಂತನನ್ನು ಕಂಡ ಧನ್ಯ ಜೀವಿಗಳು ಹರಿದಾಸರು. ಕಂಡ ಕಂಡಲ್ಲಿ ವಿಶ್ವರೂಪ ಕಾಣುವವರು.



ಇದರಂತೆ ಈ 18 ಎಂಬ ಸಂಖ್ಯೆಯು ಮತ್ತೊಂದು ಉಪನಿಷತ್ಪ್ರತಿಪಾದ್ಯವಾದ ಪ್ರಮೇಯವನ್ನು ಸೂಚಿಸುತ್ತಿರುವುದು. ಪ್ರತಿಜೀವಿ ಅನಾದಿಯಿಂದ ಹದಿನೈದು (15) ಬಂಧನಗಳಿಂದ ಬಿಗಿಯಲ್ಪಟ್ಟಿದ್ದಾನೆ. ಅವು ಶ್ರದ್ಧೆ, ಆಕಾಶ, ವಾಯು, ಅಗ್ನಿ, ಜಲ, ಪೃಥಿವೀ, ಇಂದ್ರಿಯ, ಮನಸ್ಸು, ಅನ್ನ ವೀರ್ಯ, ತಪಸ್ಸು, ಮಂತ್ರ, ಕರ್ಮ, ಲೋಕ ಮತ್ತು ನಾಮ.

**"ಪ್ರಾಣಾತ್ ಶ್ರದ್ಧಾಂ ಖಂ ವಾಯುರ್ಜೋತಿರಾಪಃ**
**ಪೃಥಿವೀಂದ್ರಿಯಂ ಮನೋಽನ್ನಮನ್ನಾದ್ ವೀರ್ಯಂ**
**ತಪೋ ಮಂತ್ರಾಃ ಕರ್ಮಲೋಕಾ ಲೋಕೇಷು ನಾಮ ಚ",**

ಈ ಹದಿನೈದು ಬಂಧನಗಳಿಂದ ಬಿಗಿಯಲ್ಪಟ್ಟ ಜೀವಿಯು ಹದಿನಾರನೆಯವನು. ಈ ಹದಿನೈದು ಬಂಧನಗಳಿಂದ ಜೀವಿಯನ್ನು ಬಂಧಿಸಿದವಳು, ಮೂಲಪ್ರಕೃತಿಗೆ ಅಭಿಮಾನಿಯಾದ ಶ್ರೀ ಭೂದುರ್ಗಾತ್ಮಕಳಾದ ರಮಾದೇವಿಯು. ಇವಳು ಹದಿನೇಳನೆಯವಳು. ರಮೆಯಿಂದ ಬಂಧಿಸಲ್ಪಟ್ಟ ಜೀವಿಯ ಈ ಹದಿನೈದುಬಂಧನಗಳನ್ನು ಕಡಿದು, ಜೀವಿಯನ್ನು

ಬಂಧಮುಕ್ತನನ್ನಾಗಿ ಮಾಡುವವನು ಪರಬ್ರಹ್ಮನಾರಾಯಣ. ಇವನು ಹದಿನೆಂಟನೆಯವನು. ಇವನೇ ಕೊನೆಯವನು. ಮೇಲೆ ಮತ್ತೊಂದು ವಸ್ತುವಿಲ್ಲ. ಇವನೇ ವಾಸುದೇವ. ದಾಸರು ಈಪ್ರಮೇಯಗಳ ಸೂಚನೆಗಾಗಿಯೇ 18ರಸಂಖ್ಯೆಯನ್ನು ಕೀರ್ತನೆಯಲ್ಲಿ ಬಳಸಿರುವರು.

ದಾಸರು ಕೀರ್ತನೆಯಲ್ಲಿ ವಾಸುದೇವಶಬ್ದವನ್ನು ಮೇಲಿಂದ ಮೇಲೆ ಬಳಸಿ ಅದರ ಅಪೂರ್ವತೆಯನ್ನು, ಅವಶ್ಯಕತೆಯನ್ನು, ತಿಳಿಸಿದ್ದಾರೆ. ಭಗವಂತನ ಈ ವಾಸುದೇವ ನಾಮ ಅವನ ಇನ್ನಿತರ ಅನಂತನಾಮಗಳಿಗೆ ವಾಚ್ಯವೂ ಆಗಿದೆ. ಇದಕ್ಕೆ ಕಾರಣ ಭಗವಂತನ ನಾಮರೂಪಗಳಿಗೆ ಭೇದವಿಲ್ಲ.

ಕೀರ್ತನೆಯಲ್ಲಿ ಅನೇಕ ಬಾರಿ ಬಳಸಲ್ಪಟ್ಟ ವಾಸುದೇವ ನಾಮವು ಅನೇಕಾರ್ಥಗಳಲ್ಲಿ ಪ್ರಯುಕ್ತವಾಗಿದೆ. ಶಬ್ದ ಒಂದೇ ಆದರೂ, ಅರ್ಥಗಳು ಮಾತ್ರ ಬೇರೆ. ದಾಸರು ವಾಸುದೇವ ಶಬ್ದವನ್ನು ಮತ್ತೆ ಮತ್ತೆ ಹೇಳಿ, ಪರಬ್ರಹ್ಮನು ಅನಂತಕಲ್ಯಾಣಗುಣಪೂರ್ಣನು, ಅನಂತ ಶಕ್ತಿಸಾಮರ್ಥ್ಯವುಳ್ಳವನು, ಸರ್ವೋತ್ತಮನು, ಸರ್ವಾಧಾರನು, ಸರ್ವಾಶ್ರಯನು, ಸರ್ವವ್ಯಾಪಕನು, ಸ್ವತಂತ್ರನು, ಸರ್ವೋತ್ಪಾದಕನೂ, ಸರ್ವಸ್ವಾಮಿಯು ಆಗಿರುವನೆಂದು ಸ್ಪಷ್ಟಪಡಿಸಿದವರು. ಇದು ನಿಜವಾದ ಉಪಾಸನೆ. ವಾಸದೇವರೂಪಗಳು ಬಹಳಷ್ಟಿವೆ. ಆತ್ಮಸೃಷ್ಟಿಯ ಪ್ರಾರಂಭದಲ್ಲಿ ಮೂಲರೂಪನಾರಾಯಣನಿಂದ ಪ್ರಕಟವಾದ ವಾಮದೇವರೂಪ ಮೊದಲನೆಯದು. ಶ್ವೇತದ್ವೀಪದಲ್ಲಿ ಸದಾ ಪವಳಿಸಿರುವ ವಾಸುದೇವರೂಪ ಎರಡನೆಯದು. ಕೇಶವಾದಿ 24 ರೂಪಗಳಲ್ಲಿ ಬರುವ ವಾಸುದೇವರೂಪ ಮೂರನೆಯದು. ವಿಶ್ವಾದಿ ಸಹಸ್ರನಾಮಗಳ ಮಧ್ಯದಲ್ಲಿ ಬರುವ ವಾಸುದೇವ ರೂಪ. ನಾಲ್ಕನೆಯದು ದ್ವಾಪರದಲ್ಲಿ ವಸುದೇವನಿಗೆ ಮಗನಾಗಿ ಪ್ರಾದುರ್ಭವಿಸಿ ಬಂದ ವಾಸುದೇವರೂಪ. ಐದನೆಯದು. ಹೀಗೆ ಹಲವಾರು ವಾಸುದೇವ ರೂಪಗಳಿವೆ. ಈ ಎಲ್ಲ ರೂಪಗಳು ನಾಮ–ರೂಪ–ಗುಣ–ಶಕ್ತಿ–ಸಾಮರ್ಥ್ಯಗಳಿಂದ ಪೂರ್ಣವಾದವುಗಳು; ದೇಶಕಾಲಗಳಲ್ಲಿ ನಿತ್ಯವಾದವುಗಳು; ಸಮಾನವಾದವುಗಳು; ಅಭಿನ್ನವಾದವುಗಳು.

ವಾಸದೇವನಾಮವು ಅನೇಕಾರ್ಥಗಳಿಂದ ಕೂಡಿದೆ. ಭಗವಂತನ ಅನೇಕ ಗುಣ–ಧರ್ಮ–ಶಕ್ತಿ–ಸಾಮರ್ಥ್ಯಗಳಿಗೆ ಸೂಚಕವಾಗಿ, ಉಪಾಸನೆಗೆ ಉಪಯುಕ್ತವಾಗಿದೆ.

ಎಲ್ಲವನ್ನು ಬಲ್ಲವನು, ಎಲ್ಲವನ್ನು ಸೃಷ್ಟಿಸುವವನು, ಕ್ರೀಡಿಸುವವನು ಎಂಬ ಈ ಮೂರು ಅರ್ಥಗಳು ವಾಸುದೇವ ಶಬ್ದದಲ್ಲಿರುವ ವಾ–ಸು –ದೇವ ಎಂಬ ಅಕ್ಷರಗಳಿಂದ ಕ್ರಮವಾಗಿ ತಿಳಿಯುವುದು. 'ವಾ' ಎಂದರೆ ತಿಳಿಯುತ್ತಾನೆ. (ವಾತಿ ಜಾನಾತಿ ಇತಿ ವಾಃ) ಸು ಎಂದರೆ ಸೃಷ್ಟಿಮಾಡುತ್ತಾನೆ. (ಸೂತೇ ಉತ್ಪಾದಯಿತೀತಿ ಸುಃ) ದೇವಶಬ್ದಕ್ಕೆ ಕ್ರೀಡಿಸುವವನು ಎಂದು ಅರ್ಥ. (ದೀವ್ಯತಿ ಕ್ರೀಡತೇ ಇತಿದೇವಃ) ಒಟ್ಟಿನಲ್ಲಿ ವಾಸುದೇವ ಶಬ್ದದಿಂದ ಎಲ್ಲವನ್ನೂ ತಿಳಿದವನು, ಎಲ್ಲವನ್ನೂ ಸೃಷ್ಟಿಸುವವನು, ಕ್ರೀಡಿಸುವವನು ಎಂಬ ಅರ್ಥಗಳು ವ್ಯಕ್ತವಾಗುವವು. (ವಾಶ್ಚಾಸೌ + ದೇವಶ್ಚಾಸಾಸುಶ್ಚಾಸೌ + ವಾಸುದೇವಃ) ಹೀಗೆ ಮೊದಲನೆಯ ವಾಸುದೇವ ಶಬ್ದ ಪ್ರಯೋಗದಿಂದ ದಾಸರು ಭಗವಂತನು ಸರ್ವಜ್ಞ, ಸೃಷ್ಟಿಕರ್ತ, ಕ್ರೀಡಾದಿಗುಣವಿಶಿಷ್ಟ ಎಂದು ಸೂಚಿಸಿದರು.



ಎರಡನೆಯ ವಾಸುದೇವ ಶಬ್ದದಿಂದ ಭಗವಂತ ಅಣುಅಣುವಿನಲ್ಲೂ ಅಂತರ್ಯಾಮಿಯಾಗಿ ವಾಸಿಸುವನು, ಎಲ್ಲವನ್ನೂ ತನ್ನೊಳಗಿಟ್ಟುಕೊಂಡವನು ಮತ್ತು ಪ್ರಕಾಶಿಸುವವನು ಎಂಬ ಈ ಮೂರು ಅರ್ಥಗಳು ತಿಳಿದು ಬರುವವು. ಈ ಅರ್ಥಗಳನ್ನು ಹೇಳುವಾಗ ವಾಸುದೇವ ಶಬ್ದವು "ಸರ್ವತ್ರವಸತೀತಿ, ಸರ್ವಮತ್ರ ವಸತೀತಿ ವಾ ವಾಸುಃ. ದೀವ್ಯತಿ ದ್ಯೋತತ ಇತಿ ದೇವಃ. ವಾಸುಶ್ಚಾಸೌ ದೇವಶ್ಚ ವಾಸುದೇವಃ ಎಂದು ತೆರೆದುಕೊಳ್ಳುತ್ತದೆ. ವಾಸ ಎಂಬ ಧಾತುವಿಗೆ ನಿವಾಸ ಎಂದು ಅರ್ಥ. ಈ ಅರ್ಥಗಳಿಂದ ಕೂಡಿದ ವಾಸುದೇವ ಶಬ್ದವನ್ನು ಪ್ರಯೋಗಿಸಿದ ದಾಸರು, ವಾಸುದೇವ ಸರ್ವಾಂತರ್ಯಾಮಿ, ಸರ್ವಾಧಾರಕ, ಪ್ರಕಾಶಮೂರ್ತಿ ಎಂದು ಸೂಚಿಸಿದರು.

ಭಗವಂತನು ಬಲಸ್ವರೂಪಿ, (ಮಹಾಬಲವಂತ)ಪ್ರಾಣರೂಪಿ, ಜೀವರಿಗೆ ಬೇಕಾದುದೆಲ್ಲವನ್ನೂ ಕೊಡುವವನು; ಇದಕ್ಕಾಗಿ ಸರ್ವತ್ರ ಇರುವವನು. ಎಂಬ ಈ ನಾಲ್ಕು ಅರ್ಥಗಳನ್ನು ವಾಸುದೇವ ಶಬ್ದದಲ್ಲಿರುವ ವ–ಅಸು–ದೇ–ವ; ಎಂಬ ಈ ಅಕ್ಷರಗಳು ತಿಳಿಸಿಕೊಡುತ್ತವೆ. ಬಲಾತ್ ವಃ; ಪ್ರಾಣರೂಪತ್ವತ್ ಅಸುಃ; ದಾತೃತ್ವಾತ್ ದೇ; ಸರ್ವತ್ರವರ್ತತ ಇತಿ ವ್ಹ ಶ್ಚಾಸೌ ಅಸುಶ್ಚಾಸೌ – ದೇಚಾಸಾ – ವಶ್ಚೆತಿ ವಾಸುದೇವ; ಇದು ವಾಸುದೇವಶಬ್ದದ ವ್ಯುತ್ಪತ್ತಿ. ಇದರಿಂದ ಭಗವಂತನು ಮಹಾಬಲಶಾಲಿ, ಪ್ರಾಣಶ್ವರೂಪ, ದಾತಾ, ಸರ್ವತ್ರವ್ಯಾಪ್ತ ಎಂದು ಸೂಚಿಸಿದರು.

ಭಗವಂತನು ಸಂಸಾರವಸ್ಥೆಯಲ್ಲಿರುವ ಜೀವರಿಗೆ ತನ್ನ ರೂಪವನ್ನು ತೋರದೆ ಆಚ್ಛಾದಿಸಿಕೊಳ್ಳುವುದರಿಂದಲೂ, ಮೋಕ್ಷದಲ್ಲಿರುವ ಜೀವರಿಗೆ ತನ್ನ ಸ್ವರೂಪವನ್ನು ಸದಾ ಕಾಣಿಸುವಂತೆ ಬೆಳಗಿಸುವನೂ ಆದ್ದುದರಿಂದ ಭಗವಂತನು ವಾಸುದೇವ ಎಂದು ಕರೆಸಿಕೊಳ್ಳುವನು. ಈ ಅರ್ಥದಲ್ಲಿ ವಾಸುದೇವ ಶಬ್ದದ ವ್ರ್ಯುತ್ಪತ್ತಿ, "ವಾಸಯತಿ ಆತ್ಮಸ್ವರೂಪಂ ಸಂಸಾರೆ ಇತಿ ವಾಸುಃ. ದೇವಯತಿ ದ್ಯೋತಯತಿ ಮೋಕ್ಷೆ ಆತ್ಮಸ್ವರೂಪಮಿತಿ ದೇವಃ. ವಾಸುಶ್ಚಾಸೌದೇವಶ್ಚ ವಾಸುದೇವಃ ಎಂದಾಗುವುದು. ಇದರಿಂದ ಭಗವಂತ ವ್ಯಕ್ತಾವ್ಯಕ್ತ ಎಂಬುದನ್ನು ನಾಲ್ಕನೆಯ ವಾಸದೇವ ಶಬ್ದಪ್ರಯೋಗದಿಂದ ದಾಸರು ಸೂಚಿಸಿರುವರು.

ಯೋಗ್ಯಜೀವರಲ್ಲಿ ಜ್ಞಾನವನ್ನು ಸ್ಥಾಪಿಸುತ್ತಾ, ಅಜ್ಞಾನಿಗಳಿಗೆ ಅಜ್ಞಾನ ಪ್ರದನಾಗಿ ಕ್ರೀಡಿಸುವುದರಿಂದಲೂ ಭಗವಂತನು ವಾಸುದೇವಶಬ್ದ ವಾಚ್ಯನಾಗಿರುವನು. ಯೋಗ್ಯೇಷು "ವಂ" ಜ್ಞಾನಂ ಅಸ್ಯತಿ ಸ್ಥಾಪಯತಿ, ತಥಾ ಅಯೋಗ್ಯೇಷು ವಂ ಜ್ಞಾನಂ ಅಸ್ಯತಿ ನಿರಸ್ಯತಿ ಇತಿ ವಾಸುಃ. ದೀವ್ಯತಿ ಕ್ರೀಡತೆ ಇತಿ ದೇವಃ. ತಥಾಚ ವಾಸುಶ್ಚಾಸೌ ದೇವಶ್ಚ ವಾಸುದೇವ, ಮೇಲಿನ ಅರ್ಥದಲ್ಲಿ ವಾಸುದೇವಶಬ್ದದ ವ್ಯುತ್ಪತ್ತಿಯಕ್ರಮ ಇದು. ಇಂಥಾ ಅರ್ಥವುಳ್ಳ ಐದನೆಯ ವಾಸುದೇವ ಶಬ್ದವನ್ನು ಪ್ರಯೋಗಿಸಿ ದಾಸಾರ್ಯರು ಭಗವಂತನು. ಜ್ಞಾನಾಜ್ಞಾನಪ್ರದನಾಗಿ ಕ್ರೀಡಿಸುವವನು ಎಂದು ಸೂಚಿಸಿರುವರು.

ಭಗವಂತನ ದಿವ್ಯಸನ್ನಿಧಾನದಿಂದ ಒಪ್ಪುವ ಶುದ್ಧವಾದ ಅಂತಃಕರಣವು 'ವಸುದೇವ' ಎನಿಸಿಕೊಳ್ಳುತ್ತದೆ. ಇಂಥಾ ಶುದ್ಧಾಂತಃಕರಣದಿಂದ ತಿಳಿಯಲ್ಪಡುವನಾದ ಕಾರಣ ಭಗವಂತನು ವಾಸುದೇವನೆನಿಸಿಕೊಳ್ಳುವನು. ವಿಶುದ್ಧಂ ಅಂತಃಕರಣಂ ವಾಸುದೇವಶಬ್ದಿತಂ. ವಿಶುದ್ಧೇ

ಅಂತಃಕರಣೇ ಅಪಗತಾವರಣಃ ಭಗವಾನ್ ಪ್ರತೀಯತೆ ಯತಃ ಅತ ಏವ ಸಃ ವಾಸುದೇವಃ. ತಥಾಚ ವಸುದೇವೇ ಪ್ರತೀಯತೆ ಇತಿ ವಾಸುದೇವಃ. (ಇದು ಬನ್ನಂಜೆಯವರ ವಿವರಣೆ) ಈ ಮೇಲಿನ ಅರ್ಥದಲ್ಲಿ ಪ್ರಸನ್ನವೆಂಕಟದಾಸರು ಆರನೆಯ ವಾಸುದೇವಶಬ್ದವನ್ನು ಪ್ರಯೋಗಿಸಿರುವರು. ಇದರಿಂದ ವಾಸುದೇವನು ಶುದ್ಧಾಂತಃಕರಣದಲ್ಲಿ ತೋರುವವ ಎಂದು ಸೂಚಿಸಿರುವರು.

ಸತ್ವಪ್ರಧಾನಗಳಾದ ಬ್ರಹ್ಮಾದಿಗಳ ಶರೀರಗಳು ವಸುದೇವ ಎನಿಸಿಕೊಳ್ಳುತ್ತವೆ. ವಿಶುದ್ಧಂ ಸತ್ತ್ವಪ್ರಧಾನಂ ಬ್ರಹ್ಮಾದಿಶರೀರಂ ವಸುದೇವಶಬ್ದಿತಂ ಇಂಥಾ ಬ್ರಹ್ಮಾದಿಗಳ ಶರೀರದಲ್ಲಿ ಅಭಿವ್ಯಕ್ತನಾಗುವುದರಿಂದ ಭಗವಂತನು ವಾಸುದೇವನೆನಿಸುವನು. (ವಸುದೇವೇ ಅಭಿವ್ಯಜ್ಯತ ಇತಿ ವಾಸುದೇವಃ) ಇಂಥಾ ಅರ್ಥದಿಂದ ಕೂಡಿದ ಏಳನೆಯ ವಾಸುದೇವ ಶಬ್ದದಿಂದ, ಭಗವಂತನು ಬ್ರಹ್ಮಾದಿಗಳ ಶರೀರದಲ್ಲಿ ಸದಾ ತೋರುವವನು ಎಂದು ಸೂಚಿಸಿರುವರು.

ಮುಕ್ತಿಯೋಗ್ಯರಾದ ಜೀವರಿಗೆ ತನ್ನ ಸ್ವರೂಪವನ್ನು ತೋರಿಸಿ, ಅವರನ್ನು ಅಪರೋಕ್ಷಿಗಳನ್ನಾಗಿ ಮಾಡಿ, ಅವರಿಗೆ ಮುಕ್ತಿಯನ್ನು ಕರುಣಿಸಿ, ಅಲ್ಲಿ ಅವರು ಆನಂದವನ್ನನುಭವಿಸುವಂತೆ ಮಾಡುವನಾದ ಕಾರಣ ಭಗವಂತನು ವಾಸುದೇವ ಎಂದು ಕರೆಸಿಕೊಳ್ಳುವನು. 'ವಾ'ಧಾತುವಿಗೆ ಗತಿ ಎಂದು ಅರ್ಥ. ಗತ್ಯರ್ಥಉಳ್ಳ ಧಾತುಗಳೆಲ್ಲ ಜ್ಞಾನವಾಚಕಗಳಾಗುವವು. ಆಗ ವಾ ಎಂದರೆ ಮುಕ್ತಿಯೋಗ್ಯ ಜೀವರಿಗೆ, ಸ ತನ್ನ ಸ್ವರೂಪ ತಿಳಿಸಿ ಕೊಡುವವನು ಎಂದು ಅರ್ಥ.

ವಾಪಯತಿ ಮುಕ್ತಿಯೋಗ್ಯಾನ್ ಪ್ರತಿ ಸ್ವಸ್ವರೂಪಂ ಜ್ಞಾಪಯತಿ ಇತಿ 'ವಾಃ'. ಸು ಎಂಬ ಅಕ್ಷರಕ್ಕೆ ಆಮುಕ್ತಿಯೋಗ್ಯರನ್ನು ಮುಕ್ತರನ್ನಾಗಿ ಮಾಡುವವನು, ಅರ್ಥಾತ್ ಶ್ವೇತದ್ವಿಪ ಅನಂತಾಸನ – ವೈಕುಂಠಲೋಕಗಳಿಗೆ ಕರೆದೊಯ್ಯುವವನು ಎಂದು ಅರ್ಥ. (ಸೂತೇ ಮುಕ್ತಿಯೋಗ್ಯಾನ್ ಮುಕ್ತಾನ್ ಕರೋತೀತಿ ಸುಃ) ಇನ್ನು ದೇವಶಬ್ದಕ್ಕೆ ಮುಕ್ತರಾದ ಜೀವರಿಗೆ ಮುಕ್ತಿಯಲ್ಲಿ, ತನ್ನ ಲೋಕಗಳಲ್ಲಿ ಆನಂದವನ್ನು ಉಣಿಸುತ್ತಾನೆ ಎಂದು ಅರ್ಥ. ದೇವಯತಿ ಮೋದಯತಿ ಇತಿ ದೇವಃ. ವಾಶ್ಚ+ಸುಶ್ಚ+ದೇವಶ್ಚ ವಾಸುದೇವಃ ಈ ಅಪೂರ್ವ ಅರ್ಥದಲ್ಲಿ ಎಂಟನೆಯ ವಾಸುದೇವ ಶಬ್ದವನ್ನು ಪ್ರಯೋಗಿಸಿ ಭಗವಂತನು "ಮುಕ್ತಿಯೋಗ್ಯರನ್ನು ಮುಕ್ತರನ್ನಾಗಿಸಿ ಆನಂದವನ್ನುಣಿಸುವನು" ಎಂದು ಸ್ಪಷ್ಟಪಡಿಸಿರುವರು.

ಇನ್ನು ಒಂಭತ್ತನೆಯ ವಾಸುದೇವ ಶಬ್ದವು ಕೃಷ್ಣವಾಚಕವು. 'ವಸುದೇವಸ್ಯ ಅಪತ್ಯಂ ಪುಮಾನ್ ವಾಸುದೇವಃ' ಎಂಬ ವ್ಯುತ್ಪತ್ತಿಗನುಸರಿಸಿ, ವಸುದೇವನಿಗೆ ಮಗನಾಗಿ ಪ್ರಾದುರ್ಭವಿಸಿ ಬಂದ ಕೃಷ್ಣನೇ ಇಲ್ಲಿ ವಾಸುದೇವ ಶಬ್ದದಿಂದ ಹೇಳಲ್ಪಡುತ್ತಿರುವನು. ಈ ಕೃಷ್ಣನೆ ವೇಂಕಟಾಚಲಪತಿ. ಇಲ್ಲಿ ಇನ್ನೊಂದು ವಿಶೇಷವಿದೆ. ಶ್ವೇತದ್ವೀಪಮಂದಿರಗತನಾದ ವಾಸುದೇವನ ಒಂದು ಕಪ್ಪು ಕೂದಲು ದ್ವಾಪರಯುಗದಲ್ಲಿ ಕೃಷ್ಣನ ರೂಪದಲ್ಲಿ ಕಾಣಿಸಿಕೊಂಡಿತು. ವೆಂಕಟಾದ್ರೀಶನ ರೂಪ ಹಾಗೆಲ್ಲ. ಶ್ವೇತದ್ವೀಪದಲ್ಲಿ ಶೇಷಪರ್ಯಂಕಶಾಯಿಯಾಗಿ ಮಲಗಿದ್ದ ವಾಸುದೇವನೇ, ಭೃಗುಋಷಿಗಳ ನೆವದಿಂದ ನೇರವಾಗಿ ದರೆಗಿಳಿದು ಬಂದು, ಪದ್ಮಾವತಿಗೆ ಪತಿಯಾಗಿ, ಧರ್ಮದ ಸಂರಕ್ಷಣೆಗಾಗಿ,



ಸಜ್ಜನರ ಉದ್ಧಾರಕ್ಕಾಗಿ ಶೇಷಾದ್ರಿಯ ಮೇಲೆ ನಿಂತನು. ಮುಂದೆ ಶ್ರೀನಿವಾಸ, ತಿಮ್ಮಪ್ಪ, ಗೋವಿಂದ, ವೇಂಕಟೇಶ, ವೆಂಕಟಾಚಲಪತಿ ಎಂಬ ನಾಮಗಳಿಂದ ಭಕ್ತರಿಂದ ಕರೆಯಲ್ಪಟ್ಟನು. ಪ್ರಕೃತ ಕೀರ್ತನೆಯಲ್ಲಿ ದಾಸರು, ಆಪ್ರಭುವನ್ನೇ ಭಕ್ತಿಯಿಂದ ಮನತುಂಬಿ ಪ್ರಸನ್ನವೆಂಕಟ ಎಂದು ಕರೆದಿರುವರು. ಪ್ರಸನ್ನವೆಂಕಟನೇ ವಾಸುದೇವ; ವಾಸುದೇವನೇ ಪ್ರಸನ್ನವೆಂಕಟ. 'ನೇಹನಾನಾಸ್ತಿ ಕಿಂಚನ' ಭಗವಂತನ ರೂಪಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ, ಭೇದವೂ ಇಲ್ಲ.

ವಾಸುದೇವಶಬ್ದದ ಈ ಅರ್ಥವಿವರಣೆ ಪಾಂಡಿತ್ಯದರ್ಶನಕ್ಕಾಗಿಯೊ, ಕಲ್ಪನಾ ಪ್ರಪಂಚದಲ್ಲೋ ಹೇಳಿದ್ದಲ್ಲ. ಇವೆಲ್ಲವೂ ದಾಸರ ಹೃದಯ. ಶ್ರೀನಿವಾಸನ ಪರಮಾನುಗ್ರಹಕ್ಕೆ ಪಾತ್ರರಾಗಿ, ಅಪರೋಕ್ಷೀಕೃತಶ್ರೀಶರೆನಿಸಿದ ಪ್ರಸನ್ನವೆಂಕಟದಾಸರು ಚಿಂತಿಸಿದ, ಕಂಡು ಅನುಭವಿಸಿದ ಅರ್ಥಗಳು. ವಾಸುದೇವ ಶಬ್ದಕ್ಕಿರುವ ಎಲ್ಲಾ ಅರ್ಥಗಳನ್ನು ಚಿಂತಿಸಿದ ಧನ್ಯಜೀವಿಗಳು ಪ್ರಸನ್ನವೇಂಕಟದಾಸರು. ಕೀರ್ತನೆಯಲ್ಲಿರುವ ವಾಸುದೇವ ಶಬ್ದ ಅನೇಕಾರ್ಥಗಳಿಂದ ಕೂಡಿದ್ದು ಎಂದು ಸೂಚಿಸುವುದಕ್ಕಾಗಿಯೇ ದಾಸರು ಒಂಭತ್ತು ವಿಶೇಷಣ ಶಬ್ದಗಳನ್ನು ಬಳಸಿರುವರು.

ಕೀರ್ತನೆಯಲ್ಲಿರುವ ವಾಸುದೇವಶಬ್ದಗಳೆಲ್ಲವೂ ವಿಶೇಷಶಬ್ದಗಳು. 1 ವಾಸವಹರ–ವಿಧಿಪತಿ, 2 ಅಖಿಳಜಗದಂತರ್ಬಹಿ, 3 ಭಕುತಹೃದಯಮಂದಿರ, 4 ವೈಕುಂಠ, 5 ಕ್ಷೀರಸಾಗರ, 6 ಶ್ರೀಕರ ಅನಂತಾಸನ, 7 ಸ್ವಾಮಿಪುಷ್ಕರ ಕೂಲಸ್ಥಿರ, 8 ಸ್ವಾಮಿ, 9 ಪ್ರಸನ್ನವೆಂಕಟ ಎಂಬ ಈ ಒಂಭತ್ತುಶಬ್ದಗಳು ವಿಶೇಷಣಗಳು. ದಾಸರನ್ನು ನಂಬಿ, ಮನಸ್ಸಿಟ್ಟು, ಭಕ್ತಿಯಿಂದ ವಿಶೇಷಣ ಶಬ್ದಾರ್ಥಗಳನ್ನು ಪರಿಶೀಲಿಸಿದಲ್ಲಿ, ಎಲ್ಲ ವಿಶೇಷಣಗಳು ವಾಸುದೇವ ಶಬ್ದಾರ್ಥ ಪ್ರತಿಪಾದಕಗಳಾಗಿ ಹೊಳೆಯುವವು.

ವಾಸುದೇವನು ಸಕಲಚೇತನಪ್ರಪಂಚಕ್ಕೆ ಸ್ವಾಮಿ;ನಾಥ; ಒಡೆಯ; ದೊರೆ; ಪ್ರಭುವಾಗಿರುವನು. ಇವನ ಸ್ವಾಮಿತ್ವ ಕೇವಲ ಜೀವರ ಸೃಷ್ಟಿಯಿಂದ ಮಾತ್ರ ಸಿದ್ಧಿಸಿದುದಲ್ಲ. ಶ್ರೀನಿವಾಸನು ಸಕಲ ಜೀವರನ್ನು ಸೃಷ್ಟಿಸುವುದರೊಟ್ಟಿಗೆ ಅವರ ಸ್ಥಿತಿಗೂ, ಲಯಕ್ಕೂ, ನಿಯಮನಕ್ಕೂ, ಜ್ಞಾನಕ್ಕೂ, ಅಜ್ಞಾನಕ್ಕೂ, ಬಂಧಕ್ಕೂ, ಮೋಕ್ಷಕ್ಕು ಪ್ರಧಾನ ಕಾರಣನು. ಇದರಿಂದಾಗಿ ಅವನು ಬ್ರಹ್ಮನಿಂದ ಹಿಡಿದು ತೃಣಜೀವಿಯ ಪರಿಯಂತಲಿರುವ ಎಲ್ಲಾ ಜೀವಿಗಳಿಗೆ ಪತಿಯಾಗಿರುವನು. ಈ ದೃಷ್ಟಿಕೋನದಲ್ಲಿ ವಾಸವ–ಹರ–ವಿಧಿಪತಿ ಎಂಬ ಶಬ್ದವನ್ನು ನೋಡಿದಾಗ, ಭಗವಂತನ ಸೃಷ್ಟಿಕರ್ತೃತ್ವ. ದಾತೃತ್ವ ಮೋಕ್ಷಪ್ರದಾತೃತ್ವಾದಿಗುಣಗಳು. ವ್ಯಕ್ತವಾಗುವವು.

ಇಲ್ಲಿ 'ವಾಸವಹರವಿಧಿಪತಿ' ಎಂಬ ಸಮಸ್ತಶಬ್ದವನ್ನು ವಾಸವಹರ–ವಿಧಿಪತಿ ಎಂದು ಎರಡಾಗಿ ವಿಭಾಗಿಸಿ, ನೋಡಿದಲ್ಲಿ, ಭಗವಂತನ ಒಂದು ಹೊಸಾಗುಣವು ಪ್ರಕಟವಾಗುವುದು. ಇಂದ್ರ–ರುದ್ರ–ಬ್ರಹ್ಮರಿಗೆ ಪತಿಯೆಂದು ಸಮಸ್ತ ಪದಕ್ಕೆ ಅರ್ಥವಾದರೆ, ವಿಭಾಗದಲ್ಲಿರುವ 'ವಾಸವಹರ' ಎಂಬ ಶಬ್ದಕ್ಕೆ ಇಂದ್ರನನ್ನು ಗೆದ್ದವನು ಎಂಬ ಅರ್ಥವು ವ್ಯಕ್ತವಾಗುವುದು. ಹರಶಬ್ದಕ್ಕೆ ರುದ್ರ ಎನ್ನುವ ಅರ್ಥದೊಟ್ಟಿಗೆ ಪರಿಹಾರ, ನಿವಾರಣೆ, ಭೇದ ಎಂಬ ಅರ್ಥಗಳು ಸಹ ಇವೆ. ಆಗ 'ವಾಸವಹರ' ಎಂಬ ಶಬ್ದಕ್ಕೆ ಇಂದ್ರನ ಗರ್ವಾಪಹಾರಕ ಎಂಬ ಅರ್ಥ ಪ್ರಕಟವಾಗುವುದು. ಭಗವಂತನು ದ್ವಾಪರದಲ್ಲಿ ವಸುದೇವನಿಗೆ ಮಗನಾಗಿ ಅವತರಿಸಿದಾಗ

ಇಂದ್ರನ ಗರ್ವವನ್ನು ಎರಡು ಬಾರಿ ಪರಿಹರಿಸಿರುವನು. ತನ್ನ ಅಸದೃಶವಾದ ಬಲದಿಂದ ಗೋವರ್ಧನಪರ್ವತವನ್ನು ಎತ್ತಿ, ಮೊದಲ ಬಾರಿಗೆ ದೇವೇಂದ್ರನ ಗರ್ವವನ್ನು ಹರಿಸುವನು. ಎರಡನೇ ಬಾರಿ ದೇವಲೋಕದಿಂದ ಪಾರಿಜಾತವೃಕ್ಷವನ್ನು ತರುವಾಗಲೂ ಯುದ್ಧದಲ್ಲಿ ಇಂದ್ರನ ಗರ್ವವನ್ನು ಹರಿಸುವನು. ಇದರಿಂದ ಭಗವಂತನ ಅನನ್ಯ ಸಾಮಾನ್ಯವಾದ ಬಲದ ಪರಿಚಯವಾಗುವುದು. ಇಂದ್ರನಿಗೆ ಯುದ್ಧ ಮಾಡಬೇಕೆಂಬ ಅಜ್ಞಾನವನ್ನು, ಯುದ್ಧದಲ್ಲಿ ಸೋತನಂತರ ಶರಣಾಗಬೇಕೆಂಬ ಜ್ಞಾನವನ್ನೂ ಕೊಟ್ಟವನು ಭಗವಂತನೆ. ಇದರಿಂದ ವಾಸವ ಹರ ಎಂಬ ಶಬ್ದದಿಂದ ಧ್ವನ್ಯರ್ಥದಲ್ಲಿ ವಾಸುದೇವ ಶಬ್ದಕ್ಕಿರುವ ಜ್ಞಾನಾಜ್ಞಾನಪ್ರದನಾಗಿ ಕ್ರೀಡಿಸುವವನು ಎಂಬ ಅರ್ಥ ವ್ಯಕ್ತವಾಗುವುದು.

**'ಅಖಿಳಜಗದಂತರ್ಬಹಿ'** ಎಂಬ ವಿಶೇಷಣದಿಂದ ವಾಸುದೇವ ಶಬ್ದಕ್ಕಿರುವ ಸರ್ವತ್ರವ್ಯಾಪ್ತ ಎಂಬ ಅರ್ಥವು ಅಭಿವ್ಯಕ್ತವಾಗುವುದು. "ಭಕ್ತಹೃದಯಮಂದಿರ" ವಿಶೇಷಣದಿಂದ ಸರ್ವಾಂತರ್ಯಾಮಿ, ವ್ಯಕ್ತಾವ್ಯಕ್ತ, ಶುದ್ಧಾಂತಕರಣದಲ್ಲಿ ತೋರುವವ ಎಂಬ ವಾಸುದೇವ ಶಬ್ದಾರ್ಥಗಳು ಪ್ರಕಟವಾಗುವವು. ವೈಕುಂಠ, ಕ್ಷೀರಸಾಗರ, ಶ್ರೀಕರಾನಂತಾಸನ ಎಂಬ ವಿಶೇಷಣಗಳಿಂದ ಮುಕ್ತಿ ಯೋಗ್ಯಗಳನ್ನು ಮುಕ್ತರನ್ನಾಗಿಸಿ ಆನಂದಕೊಡುವವ, ಸರ್ವಾಧಾರಕ, ಕ್ರೀಡಾದಿ ಗುಣವಿಶಿಷ್ಟ ಎಂಬ ವಾಸುದೇವ ಶಬ್ದಾರ್ಥಗಳು ಧ್ವನಿತವಾಗುವವು.

ಸ್ವಾಮಿಪುಷ್ಕರತೀರ್ಥಸ್ಥಿರ, ಪ್ರಸನ್ನವೆಂಕಟ ಎಂಬ ಈ ಎರಡು ವಿಶೇಷಣಗಳಿಂದ, ಪರವಾಸುದೇವನು ಭೃಗುಋಷಿಗಳ ನೆವದಿಂದ ಶ್ವೇತದ್ವೀಪವನ್ನು ಬಿಟ್ಟು, ವೆಂಕಟಾದ್ರಿಗೆ ಬಂದು ಸ್ಥಿತ ಶ್ರೀನಿವಾಸಕಲ್ಯಾಣಕ್ಕೆ ಸಂಬಂಧಪಟ್ಟ ಕಥಾಭಾಗವೆಲ್ಲವೂ ವ್ಯಕ್ತವಾಗುವುದರೊಟ್ಟಿಗೆ, ಶ್ರೀನಿವಾಸ ಕ್ರೀಡಾದಿಗುಣಪೂರ್ಣ ಸರ್ವತ್ರವ್ಯಾಪ್ತ, ವ್ಯಕ್ತಾವ್ಯಕ್ತ ಎಂಬಿವೇಗುಣಗಳು ತಿಳಿದು ಬರುವವು.

ಸ್ವಾಮಿ ಎಂಬ ವಿಶೇಷಣವಂತೂ ವಾಸುದೇವ ಶಬ್ದಕ್ಕಿರುವ 'ಸರ್ವಜ್ಞ' 'ಪ್ರಕಾಶಮೂರ್ತಿ', 'ಪ್ರಾಣಸ್ವರೂಪ' ಮುಂತಾದ ಎಲ್ಲಾ ಅರ್ಥಗಳನ್ನು ಸೂಚಿಸುವುದು. ಪ್ರಸನ್ನವೆಂಕಟದಾಸರ ಕೀರ್ತನೆಗಳೆಲ್ಲವೂ ವೇದಾಂತರಸಕಾರಂಜಿಗಳು. ಮೊಸರು ಕಡೆದಂತೆಲ್ಲಾ ಬೆಣ್ಣೆ ಬರುವಂತೆ ದಾಸರ ಕೀರ್ತನೆಗಳಿಂದ ವೇದಾಂತ ಪ್ರಮೇಯಗಳು ಹೊರಹೊಮ್ಮುವವು.

**ಕೋಲು ಪದ**

**ದಶಾವತಾರಗಳ ದಿವ್ಯರಹಸ್ಯ**

ಪ್ರಸನ್ನವೆಂಕಟದಾಸರು **"ಕೋಲು ಕಾಮನಗೆದ್ದ ಕೋಲು ಮಾಯ್ಗಳನೊದ್ದ ಕೋಲು ಆನಂದ ಮುನಿ ಪಿಡಿದಿಹ ಕೋಲೆ"** ಎಂಬ ಪಲ್ಲವಿಯಿಂದ ಪ್ರಾರಂಭವಾಗುವ, ಹನ್ನೊಂದು ಚರಣಗಳಿಂದ ಕೂಡಿದ ಒಂದು ಕೀರ್ತನೆಯನ್ನು ರಚಿಸಿರುವರು. ಈ ಕೀರ್ತನೆಯಲ್ಲಿ ಒಂದೊಂದು ಚರಣದಲ್ಲಿ ಒಂದೊಂದು ಅವತಾರದಂತೆ ಹತ್ತು ಚರಣಗಳಲ್ಲಿ ಶ್ರೀಹರಿಯ ಹತ್ತು ಅವತಾರಗಳನ್ನು ಸುಂದರವಾಗಿ ಚಿತ್ರಿಸಿರುವರು. ಈಕೀರ್ತನೆ ದಶಾವತಾರಗಳ ಸ್ವಾರಸ್ಯರಹಸ್ಯಗಳ ಆವಿಷ್ಕರಣಕ್ಕೆ ಕೈಗನ್ನಡಿ. ಮಹಾಲಕ್ಷ್ಮಿಯು ಶ್ರೀಹರಿಯ ಅಂತರಂಗ ಶ್ರೇಷ್ಠಭಕ್ತಳು. ಅವಳ ಜೀವನ ಶ್ರೀಹರಿಗೆ ಮೀಸಲು. ಶ್ರೀಹರಿಗೆ ಸೇವೆಸಲ್ಲಿಸುವಲ್ಲಿ ಶ್ರೀದೇವಿಗೆ ಸಮರಾದ ಸೇವಕರಿಲ್ಲ.



**"ಆವಾವ ದೇಶದಿ ಆವಾವ ಕಾಲದಿ ।**
**ಆವಾವ ರೂಪ ಧರಿಸಿದ ಕೋಲೆ ।**
**ಆವಾವ ರೂಪ ಧರಿಸಿದ ಹರಿ ಮನೋ ।**
**ಭಾವ ತಿಳಿದು ತಾನುದಿಸೋಳು ಕೋಲೆ ॥**

ಎಂಬಂತೆ ಶ್ರೀಹರಿಯ ಅನಂತಾನಂತರೂಪಗಳ ಸೇವೆಗಾಗಿ, ಆತಾಯಿಯು ಸಹ ಅವನ ಆಜ್ಞೆಗನುಗುಣವಾಗಿ ತಾನೂ ಅನಂತರೂಪಗಳನ್ನು ಹೊಂದುವಳು. ಕೆಲಅವತಾರಗಳಲ್ಲಿ ವ್ಯಕ್ತಳಾಗಿ, ಕೆಲಅವತಾರಗಳಲ್ಲಿ ಅವ್ಯಕ್ತಳಾಗಿದ್ದು ಸೇವೆಸಲ್ಲಿಸುತ್ತಾಳೆ. ಗಾಯತ್ರೀ ಮಂತ್ರಪ್ರತಿಪಾದ್ಯನಾದ, ಸವಿತಮಂಡಲಮಧ್ಯವರ್ತಿಯಾದ ನಾರಾಯಣನಿಗೆ, ಕಮಲರೂಪದಲ್ಲಿ ಆಸನಳಾಗಿದ್ದು, ಅವ್ಯಕ್ತಳಾಗಿ ಸೇವೆಸಲ್ಲಿಸುತ್ತಿರುವಳು. ವೇದವ್ಯಾಸಾವತಾರದಲ್ಲಿಯೂ ಸಹ ಮಹಾಲಕ್ಷ್ಮಿಯು, ಆ ಮಹಿತಾತ್ಮನಿಗೆ ಕೃಷ್ಣಾಜಿನರೂಪದಲ್ಲಿ ಆಸನಳಾಗಿ ಸೇವೆಸಲ್ಲಿಸುತ್ತಿದ್ದಾಳೆ. ಅನಿರುದ್ಧ – ಪದ್ಯುಮ್ನ – ಸಂಕರ್ಷಣ ವಾಸುದೇವಾದಿ ರೂಪಗಳಿಗೆ ಪ್ರತ್ಯಕ್ಷವಾಗಿ ಶಾಂತಿ – ಕೃತಿ – ಜಯಾ – ಮಾಯಾದಿರೂಪಗಳಿಂದ ಸೇವೆ ಸಲ್ಲಿಸುತ್ತಿರುವಳು. ಭಗವಂತನ ಪ್ರಧಾನಾವತಾರಗಳೆನಿಸಿದ ದಶಾವತಾರಗಳಲ್ಲಿ ಮತ್ಸ್ಯ – ಕೂರ್ಮ – ವರಾಹ – ನರಸಿಂಹ – ವಾಮನ – ಭಾರ್ಗವ – ಬುದ್ಧ – ಕಲ್ಕಿ ರೂಪಗಳಿಗೆ ಲಕ್ಷ್ಮಿಯು ಪತ್ನಿಯ ರೂಪದಲ್ಲಿ ಪ್ರತ್ಯಕ್ಷವಾಗಿ ಗೋಚರಿಸುವುದಿಲ್ಲ. ಮತ್ಸ್ಯ – ಕೂರ್ಮ – ವರಾಹ – ನಾರಸಿಂಹ ಬುದ್ಧರೂಪಗಳು, ಸಮಯಕ್ಕೆ ಸರಿಯಾಗಿ ಪ್ರಾದುರ್ಭವಿಸಿ, ಕಾರ್ಯ ಮುಗಿದೊಡನೆ ಅದೃಶ್ಯವಾದ ರೂಪಗಳು. ಈ ರೂಪಗಳು ಬಹಳಷ್ಟು ಕಾಲ ಕಾಣಿಸಲಿಲ್ಲ. ಆದರೂ ಇವು ನಿತ್ಯವಾದವುಗಳು; ಪೂರ್ಣವಾದವುಗಳು. ವಾಮನ – ಪರಶುರಾಮ ರೂಪಗಳು ಬ್ರಹ್ಮಚಾರಿ ರೂಪಗಳು. ರಾಮ – ಕೃಷ್ಣಾವತಾರಗಳಲ್ಲಿ ಮಾತ್ರ ರಮಾದೇವಿಯು ಸೀತಾ – ರುಕ್ಮಿಣಿ – ಸತ್ಯಭಾಮಾದಿ ರೂಪಗಳಿಂದ ವ್ಯಕ್ತಳಾಗಿ ಗೋಚರಿಸುವಳು. ರಮಾನಾರಾಯಣರ ಅವರ ಅವತಾರಗಳೆನಿಸಿದ ಸೀತಾರಾಮರ ದಾಂಪತ್ಯಜೀವನವನ್ನು, ಜೀವರ ದಾಂಪತ್ಯದಂತೆ ಊಹಿಸಬಾರದು. ನಾರಾಯಣನು ಪೂರ್ಣಕಾಮನು; ನಿತ್ಯತೃಪ್ತನು; ಜ್ಞಾನಾನಂದ ಪರಿಪೂರ್ಣನು. ರಮಾದೇವಿಯಿಂದ ಅವನಿಗೆ ಆನಂದ ಉಂಟಾಗಬೇಕಾಗಿಲ್ಲ. ಅವನಿಂದಲೇ ರಮಾಬ್ರಹ್ಮಾದಿಗಳಿಗೆ ಆನಂದ. ಇದರಿಂದಲೇ ನಿಜವಾಗಿ ಕಾಮನನ್ನು ಗೆದ್ದವನು ಅವನೆ. ಕಾಮಶಬ್ದಕ್ಕೆ ಶೃಂಗಾರವೆಂದು ಮಾತ್ರ ಅರ್ಥವಲ್ಲ. ಎಲ್ಲತರಂಹದ ಬಯಕೆಗಳೂ ಕಾಮಶಬ್ದದಿಂದ ಕರೆಯಲ್ಪಡುತ್ತವೆ. ರಾಮನಿಗೆ ಸೀತೆಯೊಬ್ಬಳೇ ಪತ್ನಿ. ಕೃಷ್ಣನಿಗೆ 16.108 ಜನ ಪತ್ನಿಯರು. ಆದರೂ ಅವನನ್ನು ಪುರಾಣಗಳು ಅಸ್ಖಲಿತಬ್ರಹ್ಮಚಾರಿ, ಅನಾದಿಬ್ರಹ್ಮಚಾರಿ ಎಂದು ಹೊಗಳಿವೆ. ಯಾವತರಹದ ಅಪೇಕ್ಷೆಗಳಿಲ್ಲದೆ, ಕೇವಲ ಜೀವರ ಉದ್ಧಾರಕ್ಕಾಗಿ, ಅಧರ್ಮಮಾರ್ಗದಲ್ಲಿ ನಡೆಯುತ್ತಾ, ಅಧರ್ಮಕ್ಕೆ ಬೆಂಬಲಿಗರಾಗಿದ್ದ ಮಾಯಾವಿಗಳನ್ನು ನಿರ್ಮೂಲನ ಮಾಡುವುದಕ್ಕಾಗಿಯೇ ಭಗವಂತನ ಎಲ್ಲಾ ಅವತಾರಗಳು. ಅದರಲ್ಲೂ ದಶಾವತಾರಗಳ ಪ್ರಾದುರ್ಭಾವ ಕೇವಲ ಈ ಮಹತ್ಕಾರ್ಯ ಸಾಧನೆಗಾಗಿಯೇ. ಇದನ್ನರಿತೇ ಜಗದ್ಗುರುಗಳಾದ ಆನಂದತೀರ್ಥಭಗವತ್ಪಾದರು ನಾರಾಯಣನ ಪಾದಪದ್ಮಗಳನ್ನು ಘಟ್ಟಿಯಾಗಿ ಹಿಡಿದರು.

**“ಹರಿರೇವ ಪರೋ ಹರಿರೇವ ಗುರುಃ**
**ಹರಿರೇವ ಜಗತ್ಪಿತೃಮಾತೃಗತಿಃ**
**ನತತೋಸ್ತ್ಯಪರಂ ಜಗದೀಢ್ಯತಮಂ**
**ಪರಮಾತ್ಪರತಃ ಪುರುಷೋತ್ತಮತಃ”**

ಎಂದು ಸಕಲಜಗತ್ತಿಗೆ ಉಪದೇಶ ನೀಡಿದರು. ಆಚಾರ್ಯರ ಉಪದೇಶಕ್ಕೆ ಮನಸೋತ ಪ್ರಸನ್ನವೆಂಕಟದಾಸರು ಸಹ, ಆಚಾರ್ಯರು ತೋರಿದ ಮಾರ್ಗದಲ್ಲಿ ನಡೆಯುತ್ತಾ, ಅವರ ನಿತ್ಯಸತ್ಯಗಳಾದ ಪ್ರಮೇಯಗಳನ್ನು ತಾವು ಅನುಭವಿಸಿ ತಮ್ಮ ಕೀರ್ತನೆಗಳ ದ್ವಾರಾ ಜಗತ್ತಿಗೆ ಹಂಚಿದ ಧನ್ಯಜೀವಿಗಳು. ಪ್ರಕೃತ ದಶಾವತಾರಗಳಿಗೆ ಸಂಬಂಧಿಸಿದ ಕೀರ್ತನೆಯಲ್ಲಿ ದಶಾವತಾರಗಳ ಚರಿತ್ರೆಯನ್ನೂ ಅವುಗಳಲ್ಲಿ ಬರುವ ಸಂಶಯಗಳಿಗೆ ಪರಿಹಾರವನ್ನೂ, ಕೆಲ ಅಪೂರ್ವಪ್ರಮೇಯಗಳನ್ನು ತಿಳಿಸಿರುವರು. ಅವುಗಳಲ್ಲಿ ಒಂದೆರಡನ್ನು ವಿಹಂಗಮ ದೃಷ್ಟಿಯಲ್ಲಿ ನೋಡೋಣ.

ಪ್ರಸನ್ನವೆಂಕಟದಾಸರು ಪ್ರಕೃತಕೀರ್ತನೆಯಲ್ಲಿ ದಶಾವತಾರಗಳನ್ನು ಹತ್ತು ಚರಣಗಳಲ್ಲಿ ವರ್ಣಿಸುತ್ತಾ, ಪ್ರತಿಚರಣದ ಕೊನೆಯಲ್ಲಿ ಆ ಅವತಾರದ ಹೆಸರನ್ನು ಉಚ್ಚರಿಸುತ್ತಾ, “ನಮ್ಮ ಮನೆದೈವ ಕೋಲೇ” ಎಂದು ಹೇಳಿರುವರು. ಇದು ಒಂದು ಅಪೂರ್ವ ಪ್ರಮೇಯಕ್ಕೆ ಸೂಚಕ. ಭಾರತೀಯಸಂಸ್ಕೃತಿಯಲ್ಲಿ ಪ್ರತಿಕುಟುಂಬಕ್ಕೆ ಮನೆದೈವ ಕುಲದೈವವೆಂಬ ಹೆಸರಿನಲ್ಲಿ ಯಾರೋ ಒಬ್ಬ ದೇವತೆಯೋ, ದೇವನೋ ಆರಾಧ್ಯದೈವವಾಗಿರುತ್ತಾರೆ. ಶ್ರೀನಿವಾಸ (ವೆಂಕಟೇಶ) ನರಸಿಂಹ, ವಿಠಲ, ರಾಮ, ಕೃಷ್ಣ, ಹನುಮಂತ, ಸುಬ್ರಹ್ಮಣ್ಯ, ವೀರಭದ್ರ, ಶಿವ ಎಂಬ ಗಂಡುದೇವತೆಗಳು ಕುಲದೇವರಾಗಿರುವುದು ಪ್ರಸಿದ್ಧ. ಹೆಣ್ಣು ದೇವತೆಗಳಲ್ಲಿ ಲಕ್ಷ್ಮೀ, ಪಾರ್ವತಿ, ದುರ್ಗಾ, ಬನಶಂಕರಿ, ಎಲ್ಲಮ್ಮ ಚೌಡೇಶ್ವರಿ. ಇವರು ಕುಲ ಮನೆದೇವತೆಯಾಗಿ ಇರುತ್ತಾರೆ. ದಶಾವತಾರಗಳಲ್ಲಿ ನರಸಿಂಹ – ರಾಮ – ಕೃಷ್ಣರನ್ನು ಹೊರತು, ಮತ್ಸ್ಯ–ಕೂರ್ಮ – ವರಾಹ – ವಾಮನ – ಪರಶುರಾಮ – ಬುದ್ಧ –ಕಲ್ಕಿ ರೂಪಗಳು ಭಾರತದ ಯಾವ ಪ್ರಾಂತದ ಜನರಿಗೂ ಕುಲದೈವಗಳಾಗಿಯಾಗಲಿ, ಮನೆದೈವಗಳಾಗಿಯಾಗಲಿ ಪ್ರಸಿದ್ಧವಾಗಿಲ್ಲ. ಆದರೆ ದಾಸರು ಮೇಲೆ ಹೇಳಿದ ಮತ್ಸ್ಯ–ಕೂರ್ಮ– ವರಾಹ ಬುದ್ಧಾದಿ ರೂಪಗಳನ್ನು ನಮ್ಮ ಕುಲದೈವ ಎಂದು ಹೇಳಿರುವರು. ದಾಸರ ಈ ಹೇಳಿಕೆ ಚಿಂತಕನ ಆಲೋಚನೆಯನ್ನು ಸಹಜವಾಗಿ ಕೆರಳಿಸುತ್ತದೆ. ಮತ್ಸ್ಯಾದಿಕೆಲರೂಪಗಳು ಮನೆದೈವಗಳಲ್ಲ. ಹಾಗಾದರೆ ಮತ್ಸ್ಯಾದಿಭಗವದ್ರೂಪಗಳು ಯಾವ ಮನೆಗೆ ದೈವಗಳು? ಆ ಮನೆಗಳು ಯಾವುವು? ಅಂಥಾ ಮನೆಗಳು ಎಷ್ಟಿವೆ? ಎಲ್ಲಿವೆ? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರ ದೊರೆಯಬೇಕಾದರೆ ಚಿಂತಕನು ಚರಿತ್ರೆಯನ್ನು ಹುಡುಕಬಾರದು. ಆಧ್ಯಾತ್ಮಪ್ರಪಂಚಕ್ಕೆ ಹೋಗಬೇಕು. ಶ್ರುತಿ–ಸ್ಮೃತಿ–ಪುರಾಣ ರಹಸ್ಯಗಳನ್ನು ಹೊರಗೆ ಹಾಕುವ ಹರಿದಾಸರಿಗೆ ಶರಣು ಹೋಗಬೇಕು. ಹರಿದಾಸಸಾಹಿತ್ಯವನ್ನು ಪ್ರವೇಶಿಸಬೇಕು. ಉಪನಿಷತ್ತುಗಳ ದೃಷ್ಟಿಯಲ್ಲಿ ಪ್ರತಿಮಾನವನ ದೇಹ ಒಂದು ದೇವಾಲಯ, “ದೇಹೋ ದೇವಾಲಯಃ ಪ್ರೋಕ್ತಃ ದೇವಾಲಯ” ಅದೊಂದು ಭಗವಂತನ ಸಂಚಾರಕ್ಕೆ ಯೋಗ್ಯವಾದ ದಿವ್ಯರಥ. ಅವನ, ಅವನ ಪರಿವಾರಕ್ಕೆ ವಾಸಯೋಗ್ಯವಾದ ಮನೆಗಳಿಂದ ಕೂಡಿದ ಸುಂದರಪಟ್ಟಣ.



ಸಂಸಾರಸಮುದ್ರದಲ್ಲಿ ಅವನ ವಿಹಾರಕ್ಕೆ ಯೋಗ್ಯವಾದ ನಾವೆ. ಮಾನವನು ತನ್ನ ಅಲಂಕಾರಕ್ಕಾಗಿ ಮೂರುತರಹದ ಉಡುಗೆಗಳನ್ನು ತಯಾರಿಸಿಕೊಳ್ಳುವನು. ಒಂದು ಸಾಧಾರಣವಾದದ್ದು. ಮತ್ತೊಂದು ಸ್ವಲ್ಪ ಬೆಲೆಬಾಳುವುದು. ಮೂರನೆಯದು ದೃಢವಾಗಿ ಬಹಳ ಕಾಲ ಬಾಳಿಕೆಗೆ ಬರುವಂಥಾದ್ದು. ಇದರಂತೆ ಭಗವಂತನು ಸಹ ಮೂರುತರಹದ ದೇವಾಲಯ – ರಥ–ಪಟ್ಟಣಗಳನ್ನು ನಿರ್ಮಿಸಿಕೊಂಡಿರುವನು.

ಪ್ರತಿಮಾನವನ ಸ್ಥೂಲಶರೀರ (ಪಾಂಚಭೌತಿಕಶರೀರ) ಕ್ಷಣಭಂಗುರವಾದದ್ದು. ಇದು ಭಗವಂತನೇ ತನಗಾಗಿ ನಿರ್ಮಿಸಿಕೊಂಡ, ಅವನದೇ ಆದ ಅನೇಕ ಮನೆಗಳಿಂದ ಕೂಡಿದ ಪಟ್ಟಣ. ಇಲ್ಲಿ ಜೀವಿಗೂ ಸ್ಥಾನ ಕೊಟ್ಟು, ಸಾಧನೆ ಮಾಡಿಕೊಳ್ಳಲು ಅವಕಾಶ ನೀಡಿರುವನು. ಇದರಂತೆ, ಅನಿರುದ್ಧ – ಲಿಂಗಶರೀರಗಳು ಸಹ ಅವನ ಪಟ್ಟಣಗಳೇ. ದೀರ್ಘಕಾಲ ಬಾಳುವಂಥವುಗಳು. ಬಹಳ ಹಳೇಯಪಟ್ಟಣಗಳು. ಆದರೆ ಕೊನೆಗೊಂದು ದಿನ ನಾಶ ಹೊಂದುವವುಗಳು. ಈ ಮೂರು ಪಟ್ಟಣಗಳನ್ನು ಭಗವಂತ ಒಂದಲ್ಲ ಒಂದು ದಿನ ಬಿಟ್ಟು ಹೋಗುತ್ತಾನೆ.

ಆದರೆ ಭಗವಂತ ಎಂದಿಗೂ ಬಿಡದೆ, ಅನಾದಿಯಿಂದ ಇರುವ, ನಿತ್ಯವಾದ ಅವನ ಪಟ್ಟಣ ಜೀವಿಯ ಸ್ವರೂಪದೇಹ. ಜೀವಿಯ ಸ್ವರೂಪದೇಹವೆಂಬ ಪಟ್ಟಣ ಭಗವಂತ ಸದಾವಾಸಿಸುವ ಪಟ್ಟಣ. ಈ ಪಟ್ಟಣದಲ್ಲಿ ಅವನಿಗೆ ಪ್ರಧಾನವಾಗಿ ಹನ್ನೊಂದು ಮನೆಗಳಿವೆ. ಅವೇ ಕಣ್ಣು, ಕಿವಿ ಮೂಗು, ಜಿಹ್ವೆ, ತ್ವಕ್, ಬಾಯಿ, ಕೈ, ಕಾಲು, ಪಾಯು, ಉಪಸ್ಥ, ಮನಸ್ಸು ಎನ್ನುವವುಗಳು. ನಿಜವಾಗಿ ಆಲೋಚಿಸಿದಲ್ಲಿ, ಈ ಸ್ವರೂಪದೇಹವೆಂಬ ಪಟ್ಟಣ, ಕಣ್ಣು ಕಮಿಗಳೆಂಬ ಹನ್ನೊಂದು ಮನೆಗಳು ಜೀವಿಗೆ ಸಂಬಂಧಿಸಿದವುಗಳು. ಜೀವಿಯ ನಿಜವಾದ ಆಸ್ತಿಗಳೆನಿಸಿದ ಈ ಪಟ್ಟಣ – ಮನೆಗಳಲ್ಲಿ, ಅವನಿಗೆ ನಿತ್ಯಾನಂದವನ್ನು ಕರುಣಿಸಲು, ಜೀವಿಯೊಟ್ಟಿಗೆ ಶಾಶ್ವತವಾಗಿ ಕರುಣಾಮೂರ್ತಿಯಾದ ಭಗವಂತನು ವಾಸಿಸುತ್ತಿರುವನು. ಅಶ್ವಾಶತಗಳಾದ ಮೊದಲಿನ ಮೂರುಪಟ್ಟಣಗಳು ಭಗವಂತನಿಗೆ ಸಂಬಂಧಿಸಿದವುಗಳು. ಜೀವಿ ಕೇವಲ ಬಾಡಿಗೆದಾರ. ಸ್ವರೂಪದೇಹ ಮಾತ್ರ ಜೀವಿಯದೆ. ಇಲ್ಲಿ ಜೀವಿ ಬಾಡಿಗೆದಾರನಲ್ಲ. ಇಂಥಾ ಜೀವಿಯ ಸ್ವರೂಪದೇಹವೆಂಬ ಪಟ್ಟಣದಲ್ಲಿರುವ ಕಣ್ಣುಕಿವಿಗಳೆಂಬ ಮನೆಗಳಲ್ಲಿ ವಾಸ ಮಾಡಿಕೊಂಡಿರುವ ಭಗವಂತನು ನಿಜವಾದ ಮನೆದೈವ. ನಿಜವಾದ ಕುಲದೈವ. ಸಕಲ ಜೀವರ ಕುಲಕ್ಕೆ ಶ್ರೀಹರಿಯೇ ಶಾಶ್ವತಕುಲದೈವ. ಹಾಗೂ ಶಾಶ್ವತಮನೆದೈವ. ಈ ಆಧ್ಯಾತ್ಮ ಚಿಂತನೆಯಲ್ಲಿ ಮುಳಗಿ ಆನಂದಿಸಿದ ಪ್ರಸನ್ನವೆಂಕಟದಾಸರು, ಸಕಲಸಾತ್ವಿಕಪ್ರಪಂಚಕ್ಕೆ ಈ ಆನಂದವನ್ನುಣಬಡಿಸಬೇಕೆಂಬ ಸಚ್ಚಿಂತನೆಯಿಂದ, ದಶಾವತಾರಗಳನ್ನು ವರ್ಣಿಸುತ್ತಾ ಮತ್ಸ್ಯಾದಿ ಭಗವದ್ರೂಪಗಳನ್ನು ‘ನಮ್ಮ ಮನೆದೈವ’ ಎಂದು ಹೊಗಳಿರುವರು.

ಸ್ಥೂಲದೇಹದ ದಶೇಂದ್ರಿಗಳಲ್ಲಿ ಭಗವಂತನ ಬೇರೆ ಬೇರೆ ರೂಪಗಳಿವೆ. ಸ್ವರೂಪದೇಹದ ದಶೇಂದ್ರಿಗಳಲ್ಲಿ ಮಾತ್ರ ಮತ್ಸಾದಿರೂಪಗಳೇ ಇವೆ. ಪ್ರಸನ್ನವೆಂಕಟದಾಸರು ಧ್ವನ್ಯರ್ಥದಲ್ಲಿ ಸ್ವರೂಪದೇಹದ ದಶೇಂದ್ರಿಯಗಳಲ್ಲಿ ಮತ್ಸ್ಯಾದಿ ದಶರೂಪಗಳಿರುವವೆಂತಲೂ, ಆದಶೇಂದ್ರಿಯಗಳೆ ಜೀವಿಯ ನಿಜವಾದ ಮನೆಗಳೆಂತಲೂ, ಆ ಮನೆಗಳಿಗೆ ಮತ್ಸ್ಯಾದಿ

ದಶರೂಪಗಳೇ ನಿಜವಾದ ದೈವಗಳೆಂತಲೂ ತಿಳಿಸಿದ್ದಾರೆ. ಪ್ರಸನ್ನವೆಂಕಟರಿಂದ ಸ್ಫೂರ್ತಿಪಡೆದ ಜಗನ್ನಾಥದಾಸರು, ಈ ಪ್ರಮೇಯವನ್ನು ಸ್ಪಷ್ಟವಾಗಿ, ವಾಚ್ಯವಾಗಿ ತಮ್ಮ ಹರಿಕಥಾಮೃತಸಾರದ ಪಂಚಾಗ್ನಿ ಹೋತ್ರಸಂಧಿಯಲ್ಲಿ (6) ಹೇಳಿರುವರು.

**"ಮೂಲರೂಪನು ಮನದೊಳಿಹ ಶ್ರವ ।**
**ಣಾಲಿಯೊಳಗಿಹ ಮತ್ಸ್ಯ ಕೂರ್ಮನು ।**
**ಕೋಲರೂಪನು ತ್ವಗ್ರಸನದೊಳಗಿಪ್ಪ ನರಸಿಂಹ ॥**
**ಬಾಲವಟು ವಾಮನನು ನಾಸಿಕ ।**
**ನಾಳದೊಳು ವದನದಲಿ ಭಾರ್ಗವ ।**
**ವಾಲಿಭಂಜನ ಹಸ್ತದೊಳು ಪಾದದಲಿ ಶ್ರೀಕೃಷ್ಣ ॥**

**"ಜನವಿಮೋಹಕ ಬುದ್ಧ ಪಾಯುಗ ।**
**ದನುಜಭಂಜನ ಕಲ್ಕಿ ಮೇಢ್ರದಿ ।**
**ಅನುಭವಿಪ ವಿಷಯಗಳ ಕೃಷ್ಣಾ ।**
**ರ್ಪಣವೆನಲು ಕೈಕೊಂಬ ವೃಜಿನಾ ।**
**ರ್ದನ ವರಜಗನ್ನಾಥವಿಠಲ ವಿಶ್ವವ್ಯಾಪಕನು ॥"**

ಜೀವಿಯ ಸ್ವರೂಪ ಮನಸ್ಸಿನಲ್ಲಿ – ಮೂಲರೂಪಿ ನಾರಾಯಣ ಇರುತ್ತಾನೆ.

| | | |
|---|---|---|
| ಸ್ವರೂಪಶ್ರವಣೇಂದ್ರಿಯದಲ್ಲಿ (ಕಿವಿ) | – | ಮತ್ಸ್ಯ |
| ಸ್ವರೂಪನಯನೇಂದ್ರಿಯದಲ್ಲಿ (ಕಣ್ಣು) | – | ಕೂರ್ಮ |
| ಸ್ವರೂಪತ್ವಗಿಂದ್ರಿಯದಲ್ಲಿ (ಚರ್ಮ) | – | ವರಾಹ |
| ಸ್ವರೂಪರಸನೇಂದ್ರಿಯದಲ್ಲಿ (ನಾಲಿಗೆ) | – | ನಾರಸಿಂಹ |
| ಸ್ವರೂಪಘ್ರಾಣೇಂದ್ರಿಯದಲ್ಲಿ (ಮೂಗು) | – | ವಾಮನ |
| ಸ್ವರೂಪವದನೇಂದ್ರಿಯದಲ್ಲಿ (ಬಾಯಿ) | – | ಪರಶುರಾಮ |
| ಸ್ವರೂಪಹಸ್ತಗಳಲ್ಲಿ (ಕೈಗಳು) | – | ಶ್ರೀರಾಮ |
| ಸ್ವರೂಪಪಾದಗಳಲ್ಲಿ (ಕಾಲು) | – | ಶ್ರೀಕೃಷ್ಣ |
| ಸ್ವರೂಪಪಾಯುಇಂದ್ರಿಯದಲ್ಲಿ (ಗುದ) | – | ಬುದ್ಧ |
| ಸ್ವರೂಪಉಪಸ್ಥೇಂದ್ರಿಯದಲ್ಲಿ (ಮೇಢ್ರ) | – | ಕಲ್ಕಿ |

ಪ್ರಸನ್ನವೆಂಕಟದಾಸರ ನಿಲುವು – ಆಲೋಚನಾಸರಣಿಗಳು ಅಪೂರ್ವ. ದಾಸರು 'ನಮ್ಮ ಮನೆದೈವ' ಎಂಬಲ್ಲಿ ಬಹುವಚನದಲ್ಲಿರುವ 'ನಮ್ಮ' ಎಂಬ ಶಬ್ದವನ್ನು ಪ್ರಯೋಗಿಸಿರುವರು. ಸಂಸಾರಾವಸ್ಥೆಯಲ್ಲಿ ಲೌಕಿಕವಾಗಿ ಒಬ್ಬೊಬ್ಬರಿಗೆ ಒಬ್ಬೊಬ್ಬದೇವತೆ



ಮನೆದೈವವಾಗಿರಬಹುದು. ಆಧ್ಯಾತ್ಮ ಪ್ರಪಂಚದಲ್ಲಿ ಎಲ್ಲ ಜೀವಕೋಟಿಗೆ ಈ ಮತ್ಸ್ಯಾದಿದಶಾವತಾರಗಳೇ ಮನೆದೈವಗಳು. ಈ ಸಚ್ಚಿಂತನೆಯಲ್ಲಿ ಮೈಮರೆತು ಈ ಕೃತಿಯನ್ನು ಹಾಡಿ ಆನಂದಿಸಿದಲ್ಲಿ, ಈಹಾಡೆ ನಮ್ಮನ್ನು ಮುಕ್ತಿಮಂಟಪಕ್ಕೆ ಕರೆದೊಯ್ಯುವ ಪುಷ್ಪಕವಿಮಾನವಾಗುವುದು.

ದಾಸರು ಈ ಕೀರ್ತನೆಯ ಪ್ರತಿಚರಣದ ಮೊದಲ ಮೂರುಪಾದಗಳಲ್ಲಿ, ತಾವು ಹೇಳಲಿರುವ ಭಗವದ್ರೂಪದ ಶ್ರುತಿ – ಪುರಾಣಪ್ರಸಿದ್ಧವಾದ ಚರಿತ್ರೆಯ ಭಾಗವನ್ನು ಹೇಳಿರುತ್ತಾರೆ. ಭಗವಂತನು ಅಣುವಿನಲ್ಲಿ ಮಹತ್ತನ್ನು ಅಡಗಿಸುತ್ತಾನಂತೆ. ಅದರಂತೆ ಅವನ ಕರುಣೆಯಕೂಸಾದ_ದಾಸರು ಸಹ, ಅತಿಚಿಕ್ಕವುಗಳಾದ ಮೂರುಪಾದಗಳಲ್ಲಿ ಅವತಾರದ ಪ್ರಧಾನಕಥಾಂಶಗಳನೆಲ್ಲಾ ಹೇಳಿದ್ದಾರೆ. ಮೂರನೇ ಪಾದವಂತು ಎರಡನೆಯ ಪಾದದ ಪುನರಾವೃತ್ತಿರೂಪ. ರಾಮಾವತಾರ ವರ್ಣನೆಯಿಂದ ಕೂಡಿದ ಚರಣದ ಸ್ವರೂಪ ಈ ಕೆಳಕಂಡಂತೆ ಇದೆ.

**ಕೌಸಲ್ಯೆಗರ್ಭದಿ ಜನಿಸಿದ ಕೃಪೆಯಲ್ಲಿ**
**ಕೌಶಿಕಕ್ರತುವ ಕಾಯ್ದನು ಕೋಲೆ**
**ಕೌಶಿಕಕ್ರತುವ ಕಾಯ್ದ ರಾವಣಾಂತಕ**
**ಶ್ರೀಸೀತಾರಾಮ ಮನೆದೈವ ಕೋಲೆ ॥**

ಈ ಚರಣದಲ್ಲಿ ಇಡೀರಾಮಾಯಣದ ಕಥಾಭಾಗವು ಸಂಕ್ಷೇಪರೂಪದಲ್ಲಿ ಚಿತ್ರಿತವಾಗಿದೆ.

ಈ ಚರಣದಲ್ಲಿ ಕಾಣುವ 'ಕೃಪೆಯಲಿ' ಎಂಬ ಶಬ್ದವು ರಾಮಾವತಾರಕ್ಕೆ ಸಂಬಂಧಿಸಿದ ಅನೇಕಕಾರಣಗಳನ್ನು ಸೂಚಿಸುವುದು. ಶಾಪಗ್ರಸ್ತರಾದ ಜಯವಿಜಯರು ಎರಡನೆಯ ಜನ್ಮದಲ್ಲಿ ರಾವಣ – ಕುಂಭಕರ್ಣರಾಗಿ ಜನಿಸಿಬಂದರು. ತನ್ನ ದ್ವಾರಪಾಲಕರನ್ನು ಶಾಪದಿಂದ ಮುಕ್ತರನ್ನಾಗಿ ಮಾಡಲು, ಅವರ ಮೇಲಿನ ಕೃಪೆಯಿಂದ, ಶ್ವೇತದ್ವೀಪಮಂದಿರಗತನಾದ ಪರವಾಸುದೇವನು, ಕೌಸಲ್ಯಾಗರ್ಭದಿಂದ ಜನಿಸಿಬಂದನು. ರಾವಣಾದಿಗಳ ದಬ್ಬಾಳಿಕೆಯಿಂದ ಪೀಡಿತವಾದ ದೇವತಾಲೋಕವು ಧರ್ಮಸಂರಕ್ಷಣೆಗಾಗಿ ವಾಸುದೇವನನ್ನು ಪ್ರಾರ್ಥಿಸಲು, ಅವರ ಸಂರಕ್ಷಣೆಗಾಗಿ ಅದರ ಮೇಲಿನ ಕೃಪೆಯಿಂದ ವಾಸುದೇವನು ಕೌಸಲ್ಯಾಗರ್ಭದಿಂದ ರಾಮನಾಗಿ ಜನಿಸಿ ಬಂದನು. ವಶಿಷ್ಠ ಋಷ್ಯಶೃಂಗರ ನೇತೃತ್ವದಲ್ಲಿ ಮಕ್ಕಳಿಗಾಗಿ ಪುತ್ರಕಾಮೇಷ್ಟಿ ಮೊದಲಾದ ಯಾಗಗಳನ್ನು ನಿರ್ವಹಿಸಿದ, ಧರ್ಮಾತ್ಮನೂ, ಭಕ್ತನೂ ಆದ ದಶರಥನ ಮೇಲಿನ ಕೃಪೆಯಿಂದ ವಾಸುದೇವನು ರಾಮನಾಗಿ ಜನಿಸಿಬಂದನು. ಅಹಲ್ಯ – ಗುಹ – ಜಟಾಯು – ಶಬರಿ – ಹನುಮ – ಸುಗ್ರೀವ – ವಿಭೀಷಣಾದಿ ಅನೇಕಭಕ್ತರು ಕರ್ಮಭೂಮಿ ಎನಿಸಿದ ಭಾರತಾವನಿಯಲ್ಲಿ ಜನಿಸಿ, ಭಗವಂತನ ಆಗಮನದರ್ಶನಾದಿಗಳಿಗಾಗಿ ಕಾದಿದ್ದರು. ಇವರ ಮೇಲಿನ ಕೃಪೆಯಿಂದ, ಇವರ ಉದ್ಧಾರಕ್ಕಾಗಿ ಭಗವಂತನು ಕೌಸಲ್ಯಾಗರ್ಭದಿಂದ ಜನಿಸಿ ಬಂದನು. ಲೋಕದ ಜನರಿಗೆ ಆದರ್ಶಜೀವನದ ಬಗ್ಗೆ ಮಾರ್ಗದರ್ಶನ ಮಾಡಲು, ಭಗವಂತನು ಕೃಪೆಯಿಂದ ರಾಮನಾಗಿ ಅವತರಿಸಿದನು. ಪ್ರಧಾನವಾಗಿ ದುಷ್ಟ ಶಿಕ್ಷಣೆ, ಶಿಷ್ಟರಕ್ಷಣೆಗಾಗಿ, ತದ್ವಾರಾ ಅಧರ್ಮವನ್ನು ತುಳಿದು ಧರ್ಮದ ಪುನರುತ್ಥಾನಕ್ಕಾಗಿ, ಪರಬ್ರಹ್ಮ

ವಾಸುದೇವನು ಕೃಪೆಯಿಂದ ಕೌಸಲ್ಯಾ ಗರ್ಭದಿಂದ ರಾಮನಾಗಿ ಅವತರಿಸಿಬಂದನು. ರಾಮಜನನಕ್ಕೆ ಕಾರಣಗಳೆನಿಸಿದ ಈ ಎಲ್ಲವನ್ನು 'ಪ್ರಸನ್ನವೆಂಕಟದಾಸರು ಕೃಪೆಯಿಂದ' ಎಂಬ ಒಂದೇ ಶಬ್ದದಿಂದ ಸೂಚಿಸಿರುವರು.

ರಾಮಚಂದ್ರನು ಮೊಟ್ಟಮೊದಲು ಮಾಡಿದ ಸತ್ಕರ್ಮವೆಂದರೆ ವಿಶ್ವಾಮಿತ್ರನ ಯಾಗಸಂರಕ್ಷಣೆ. ಈ ಯಾಗಸಂರಕ್ಷಣೆಯೇ ಮುಂದಿನ ಇಡೀರಾಮಾಯಣದ ಕಥೆಗೆ ನಾಂದಿಯಾಯಿತು. ಯಾಗಸಂರಕ್ಷಣೆಗೆ ಹೊರಟ ರಾಮನು ಪ್ರಾರಂಭದಲ್ಲೇ ತಾಟಕಿಯನ್ನು ಸಂಹರಿಸಿ, ಮಾರೀಚ ಸುಬಾಹು ಮುಂತಾದ ರಾಕ್ಷಸರಲ್ಲಿ ದ್ವೇಷಾಗ್ನಿಯನ್ನು ಬೆಳಗಿಸಿದನು. ಯಾಗಸಂರಕ್ಷಣೆಯ ಕಾಲದಲ್ಲಿ ಸುಬಾಹುವನ್ನು ಸಂಹರಿಸಿ, ಮಾರೀಚನನ್ನು ಘಾಯಗೊಳಿಸಿ ರಾವಣನನ್ನು ಕೆರಳಿಸಿದನು. ಇದೇ ರಾಮಾಯಣದ ಮುಖ್ಯಾಂಶವೆನಿಸಿದ ರಾವಣಾದಿ ದುಷ್ಟರಸಂಹಾರಕ್ಕೆ ಪ್ರಧಾನಕಾರಣವಾಯಿತು. ರಾವಣಾಂತಕನಾದ ರಾಮನು ಸೀತಾಪತಿ ಸೀತೆಯಾದರು ಲಕ್ಷ್ಮಿಯ ಅವತಾರಳು. ಅಯೋನಿಜೇ. ಇದರ ಸೂಚನೆಗಾಗಿಯೆ ಶ್ರೀಶಬ್ದವನ್ನು ಸೀತೆಗೆ ವಿಶೇಷಣವಾಗಿ ಬಳಸಿರುವರು.

ಇಷ್ಟಕ್ಕೆ ತೃಪ್ತರಾಗದ ದಾಸಾರ್ಯರು ಸೀತೆಗೆ ಶ್ರೀಶಬ್ದವನ್ನು ವಿಶೇಷಣವಾಗಿ ಬಳಸಿದಂತೆ ಶ್ರೀಸೀತಾ ಶಬ್ದವನ್ನು ರಾಮನಿಗೆ ವಿಶೇಷಣವಾಗಿ ಬಳಸಿರುವುದು. ಇದರಿಂದಲೂ, ಒಂದು ಪ್ರಮೇಯವು ವ್ಯಕ್ತವಾಗುವುದು ರಾಮನು ನಮ್ಮ ಮನೆದೈವ. ಸ್ವರೂಪದೇಹದ ಹಸ್ತೇಂದ್ರಿಗಳೆಂಬ ಮನೆಗೆ ದೈವ. ಇಲ್ಲಿ ರಾಮ ಒಂಟಿಯಾಗಿ ಇರುವುದಿಲ್ಲ. ಸೀತಾಸಮೇತನಾಗಿ ಇದ್ದು ಉಪಾಸಕವಿಗೆ ದರ್ಶನ ಕೊಡುತ್ತಾನೆ. ರಾಮಾಸೀತೆಯರನ್ನು ಪ್ರತ್ಯೇಕಪ್ರತ್ಯೇಕವಾಗಿ ಉಪಾಸಿಸಬಾರದು. ರಾಮನನ್ನು ಸೀತಾಸಹಿತನನ್ನಾಗಿ, ಸೀತೆಯನ್ನು ರಾಮಸಹಿತಳನ್ನಾಗಿಯೂ ಉಪಾಸಿಸಬೇಕು. ಅವರಿಬ್ಬರೂ ನಿತ್ಯಾವಿಯೋಗಿಗಳು. ಪೃಥಕ್‌ಚಿಂತನೆ ತಾರಕವಲ್ಲ. ಅದನ್ನು ಭಗವಂತನೂ ಅಂಗೀಕರಿಸುವುದಿಲ್ಲ. ದಂಪತಿಗಳ ಚಿಂತನೇ ತಾರಕ. ಅಪರೋಕ್ಷ ಕಾಲದಲ್ಲೂ ಬಿಂಬರೂಪೀ ಭಗವಂತನು ಲಕ್ಷ್ಮೀಸಹಿತನಾಗಿಯೇ ಜೀವಿಗೆ ದರ್ಶನ ನೀಡುವನು. ಈ ಅಪೂರ್ವಪ್ರಮೇಯದ ಪರಿಚಯಕ್ಕಾಗಿಯೇ ದಾಸಾರ್ಯರು 'ಶ್ರೀಸೀತಾರಾಮ' ಎಂಬ ಶಬ್ದವನ್ನು ಪ್ರಯೋಗಿಸಿರುವರು.

ದಾಸಾರ್ಯರು ಕೀರ್ತನೆಯ ಚರಣಗಳಲ್ಲಿ ಕೋಲೆ ಎನ್ನುವ ಅಚ್ಚ ಕನ್ನಡ ಶಬ್ದವನ್ನು ಬಳಸಿರುವರು. ಈ ಕನ್ನಡಶಬ್ದವನ್ನು ಅಧಮಾರುಮಠಾಧೀಶರಂಥಾ ಮಹಿತಾತ್ಮರು ಸಂಸ್ಕೃತಶಬ್ದವನ್ನಾಗಿಸಿ, ಕೋಶಗಳ ಸಹಾಯದಿಂದ 'ಕೋಲೇ' ಶಬ್ದದಲ್ಲಿರುವ ಕಕಾಲಕಾರಗಳಿಗೆ ವಿವಿಧಾರ್ಥಗಳನ್ನು ಹೇಳಿ, ಇಡೀ ಶಬ್ದಕ್ಕೆ ಹೊಸ ಹೊಸ ಅರ್ಥಗಳನ್ನು ಹೇಳಿರುವರು. ಪ್ರಕೃತ ರಾಮಾವತಾರವನ್ನು ಹೇಳುವ ಈ ಚರಣದಲ್ಲಿರುವ 'ಕೋಲೆ' ಎಂಬ ಶಬ್ದವು ಸಹ ರಾಮನಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಹೇಳುವುದು.

ಕೋಲೇ ಎಂಬ ಶಬ್ದದಲ್ಲಿ 'ಕ' ಮತ್ತು 'ಲ' ಎಂಬ ಎರಡು ಅಕ್ಷರಗಳಿವೆ. ಈ ಕಕಾರ ಲಕಾರಗಳಿಗೆ ಕೋಶದರೀತ್ಯಾ ಕಕಾರದ, ನಾನಾರ್ಥಗಳಿವೆ. ಕಕಾರದ, ಅರ್ಥವನ್ನು ಹೇಳುತ್ತಾ ಕೋಶಗಳು.



**ಕೋ ಬ್ರಹ್ಮಾತ್ಮನಿಲಾಕಾಗ್ನಿಚಿತ್ತಧೀ ಯಮ ಕೇಕಿಷು ।**
**ವಿಷ್ಣಾವಾಹತಶಬ್ದೆಬ್ಧೌ ಸಿತವರ್ಣೇ ವಸೌದ್ಯುತ್ತಾ ।**
**ಕಂ ಶಿರೋಂಬುಸುಖೇ ಕ್ಲೀಬಂ ತತ್ರೈವ ಚ ಕಮವ್ಯಯಂ ।**

ಎಂದು ಹೇಳಿವೆ. (ಇದು ನಾನಾರ್ಥ ಕೋಶದ ಶ್ಲೋಕ)

ಈ ಕೋಶದರೀತ್ಯಾ ಕಃ ಎಂಬ ಅಕ್ಷರಕ್ಕೆ ಕ್ರಮವಾಗಿ ಬ್ರಹ್ಮ, ಆತ್ಮ, ಅನಿಲ (ಘಾಳಿ), ಅಗ್ನಿ, ಚಿತ್ತ, ಕೇಕಿ (ನವಿಲು), ವಿಷ್ಣು, ಆಹತಶಬ್ದ (ಹೊಡೆತದ ಶಬ್ದ), ಅಬ್ಧಿ (ಸಮುದ್ರ), ಸಿತವರ್ಣ (ಬಿಳಿಬಣ್ಣ), ವಸು, ದ್ಯುತಿ (ಕಾಂತಿ–ಪ್ರಕಾಶ), ಶಿರಸ್ಸು (ತಲೆ), ಅಂಬು (ನೀರು), ಸುಖ ಎಂದು ಅರ್ಥಗಳು ಇವೆ. ಇದರಂತೆ ಕೋಶಗಳು ಲಕಾರದ ಬಗ್ಗೆಯೂ

**ಲೋ ದೀಪ್ತೌ ದ್ಯಾಂ ಲಶ್ಚ ಭೂಮೌಭಯೇ ಚಾಹ್ಲಾದನೇಪಿಚ ।**
**ಲೋವಾತೇ ಲವಣೇ ಚ ಸ್ಯಾಲ್ಲೋದಾನೇ ಚ ಪ್ರಕೀರ್ತಿತಃ ।**
**ಲಃಶ್ಲೇಷೇ ಚಾಶಯೇ ಚೈವ ಲಕಾರಃ ಸಾಂತ್ವನೇಪಿಚ** । ಎಂದ ಹೇಳಿವೆ.

ಈಕೋಶದಂತೆ ಲಕಾರಕ್ಕೆ ಕ್ರಮವಾಗಿ ದೀಪ್ತಿ (ಪ್ರಕಾಶ), ಭೂಮಿ, ಭಯ, ಆಹ್ಲಾದನೆ (ಸಂತೋಷಪಡಿಸುವುದು), ವಾಯು(ಗಾಳಿ), ಲವಣ (ಉಪ್ಪು), ದಾನ (ಕೊಡುಗೆ) ಶ್ಲೇಷ, ಆಶ್ರಯ, ಅಭಿಪ್ರಾಯ, ಪ್ರಳಯ, ಸಾಧನ, ಮನಸ್ಸು, ವರುಣ, ಸಮಾಧಾನಪಡಿಸುವುದು ಎಂಬ ಅರ್ಥಗಳಿವೆ.

ಕೋಲೇಶಬ್ದದಲ್ಲಿರುವ ಕಕಾರ ಲಕಾರಗಳನ್ನು ಮೇಲಿನ ಅರ್ಥಗಳಿಗನುಗುಣಾವಾಗಿ ಚಿಂತಿಸಿದಲ್ಲಿ ರಾಮನ ವ್ಯಕ್ತಿತ್ವ ಹಾಗೂ ಗುಣಗಳ ಪರಿಚಯವಾಗುವುದು.

ಕಂವಾಯುಪುತ್ರನಾದ ಹನುಮಂತನನ್ನು, ಲಂ ಆಲಿಂಗನದಿಂದ ಸಂತೋಷಪಡಿಸಿದವನು ಶ್ರೀರಾಮ ಎಂಬ ಅರ್ಥವು ಕೋಲೇ ಶಬ್ದದಿಂದ ವ್ಯಕ್ತವಾಗುವುದು ಹನುಮಂತನು ಸೀತೆಯನ್ನು ಲಂಕೆಯಲ್ಲಿ ಕಂಡು, ಅವಳಿಂದ ಕೊಡಲ್ಪಟ್ಟ ಚೂಡಾಮಣಿಯನ್ನು ತಂದು ರಾಮನಿಗೆ ಒಪ್ಪಿಸಿದ. ಶ್ರೀರಾಮ ಚಂದ್ರನು ಸಂತೋಷದಿಂದ ಆಂಜನೇಯನಿಗೆ ತನ್ನ ಆಲಿಂಗವನ್ನು ಕೊಟ್ಟು ಆತನನ್ನು ಸಂತೋಷಪಡಿಸುತ್ತಾನೆ. ಈ ಸನ್ನಿವೇಶವನ್ನು ಆಚಾರ್ಯ ಮಧ್ವರು ತಮ್ಮ ಸುಂದರ ಕಾಂಡದಲ್ಲಿ ಬಹು ರಮಣೀಯವಾಗಿ ಚಿತ್ರಿಸಿರುವರು.

**“ರಾಮೋಪಿ ನಾನ್ಯಮನುದಾತು ಮಮುಷ್ಯ ಯೋಗ್ಯ**
**ಮತ್ಯಂತಭಕ್ತಿ ಭರಿತಸ್ಯ ವಿಲಕ್ಷ್ಯ ಕಿಂಚಿತ್**
**ಸ್ವಾತ್ಮಪ್ರದಾನಮಧಿಕಂ ಪವನಾತ್ಮಜಸ್ಯ**
**ಕುರ್ವನ್ ಸಮಾಶ್ಲಿಷದಮುಂ ಪರಮಾಭಿತುಷ್ಟಃ ।**

ವಾಯುದೇವನೇ ತ್ರೇತಾಯುಗದಲ್ಲಿ ಹನುಮಂತನಾಗಿ ಅವತರಿಸಿದನು. ಇದರಿಂದ ಹನುಮಂತನು ಬೇರೆಯಲ್ಲ ವಾಯು ಬೇರೆಯಲ್ಲ. ವಾಯುದೇವನಿಗೆ ವಾಚಕವಾದ ಕ ಶಬ್ದವು ಹನುಮಂತನಿಗೂ ವಾಚಕವಾಗುವುದು. ಲ ಕ್ಕೆ ಸಂತೋಷಬಡಿಸುವಿಕೆ ಎಂಬ

ಅರ್ಥವಿರುವುದರಿಂದ ಕ ಶಬ್ದವಾಚ್ಯನಾದ ಹನುಮಂತನು ಚೂಡಾಮಣಿಯನ್ನು ರಾಮನಿಗೆ ಒಪ್ಪಿಸಿ ರಾಮಚಂದ್ರನನ್ನು ಸಂತೋಷ ಬಡಿಸಿದನು ಎಂಬ ಅರ್ಥವು ಕೋಲೇ ಶಬ್ದದಿಂದ ತಿಳಿದುಬರುವುದು.

ಕ ಶಬ್ದಕ್ಕೆ ಮನಸ್ಸು ಎಂದು ಅರ್ಥ. ಶ್ರೀರಾಮಚಂದ್ರನು ತನ್ನನ್ನು ನಂಬಿದ ಎಲ್ಲರ ಮನಸ್ಸುಗಳನ್ನು, ಲಃ ಸಂತೋಷಬಡಿಸಿದನು. ಇದನ್ನು ರಾಮಯಣದ ಉದ್ದಕ್ಕೂ ಕಾಣಬಹುದು.

ಕ ಶಬ್ದಕ್ಕೆ ಸಮುದ್ರವೆಂದು ಅರ್ಥವಿದೆ. ಲಂಕೆಗೆ ಹೋಗಲು ದಾರಿ ತೋರಬೇಕಾಗಿ ಶ್ರೀರಾಮಚಂದ್ರನು ಸಮುದ್ರರಾಜನನ್ನು ಪ್ರಾರ್ಥಿಸುವನು. ಸಮುದ್ರರಾಜನು ಉತ್ತರ ಕೂಡದೆ ಗಂಭೀರವಾಗಿ ತೋರುತ್ತಾನೆ. ಆಗ ರಾಮಚಂದ್ರನು ಧನುಷ್ಠೇಂಕಾರ ಮಾಡಿ ಸಮುದ್ರ ಶೋಷಣೆಗೆ ಸಿದ್ಧನಾಗಲು, ಸಮುದ್ರರಾಜನು ಭಯಕಂಪಿತನಾಗಿ ನಿಜರೂಪದಿಂದ ಬಂದು ರಾಮಚಂದ್ರನಿಗೆ ಶರಣಾಗುತ್ತಾನೆ. ಆಗ ರಾಮಚಂದ್ರನು ಸಮುದ್ರನ ತಪ್ಪನ್ನು ಮನ್ನಿಸಿ, ಅವನನ್ನು ಸ್ವೀಕರಿಸುತ್ತಾನೆ. ಈ ವೃತ್ತಾಂತವು ಕೋಲೆ ಶಬ್ದದಿಂದ ವ್ಯಕ್ತವಾಗುತ್ತದೆ. ಕಂ ಸಮುದ್ರನನ್ನು ಅವನ ಎಲ್ಲಾ ತಪ್ಪುಗಳನ್ನು ಮನ್ನಿಸಿ, ಶಿಶ್ಯನನ್ನಾಗಿ (ಲಾ ಆದಾನೆ) ಸ್ವೀಕರಿಸಿದನು.

ಕ ಶಬ್ದಕ್ಕೆ ತೇಜಸ್ಸು ಎಂದು ಅರ್ಥ. ಲ ಶಬ್ದಕ್ಕೆ ಆಶ್ರಯ ಎಂದು ಅರ್ಥ. ಈ ಅರ್ಥಗಳ ದೃಷ್ಟಿಯಲ್ಲಿ ನೋಡಿದಾಗ, ಶ್ರೀರಾಮಚಂದ್ರನು ತೇಜಸ್ಸಿಗೆ ಆಶ್ರಯನಾಗಿದ್ದಾನೆ ಎಂಬ ಅರ್ಥವು ಅಭಿವ್ಯಕ್ತವಾಗುವುದು. ರಾಮಚಂದ್ರನ ತೇಜಸ್ಸನ್ನು ಕಂಡು ದೈತ್ಯರು ಸಹ ಚಕಿತರಾದ ಸನ್ನಿವೇಶಗಳು ರಾಮಾಯಣದಲ್ಲಿ ಬಹುಳ ಬರುತ್ತವೆ. ತೇಜಸ್ಸಿಗೆ ರಾಮಚಂದ್ರನು ಲ ಆಶ್ರಯನು.

ಹೀಗೆ ಪ್ರಸನ್ನವೆಂಕಟದಾಸರ ಕೀರ್ತನೆಗಳು, ಅನೇಕವೇದಾಂತಪ್ರಮೇಯಗಳಿಗೆ ಆಗಾರಗಳಾಗಿ, ಬಹ್ವರ್ಥಗರ್ಭಿತಗಳಾಗಿ ಶೋಭಿಸುತ್ತಿವೆ. ಇಲ್ಲಿಯವರೆವಿಗೆ ಪ್ರಸನ್ನ ವೆಂಕಟದಾಸರ ಸಾಹಿತ್ಯಸೌಂದರ್ಯವನ್ನು ಅಲ್ಲಲ್ಲಿ ಮೇಲ್ನೋಟದಿಂದ ನೋಡಿದ್ದೇವೆ. ಈಗ ಪ್ರಸನ್ನವೆಂಕಟದಾಸರ ಅತ್ಯಂತಜನಪ್ರಿಯವಾದ, ದಾಸರು ಶ್ರೀನಿವಾಸನ ಮುಂದೆನಿಂತು ಅವನೊಡನೆ ಮಾತನಾಡಿದಂತಿರುವ, ಪ್ರಮೇಯಪರಂಪರೆಗಳನ್ನು ಪ್ರಸರಿಸುವ, ಬಹುಸುಂದರವಾದ, ಸುಲಲಿತವಾದ "ಬಿಡೆನೋ ನಿನ್ನಂಘ್ರಿ ಶ್ರೀನಿವಾಸ ಎನ್ನ ದುಡಿಸಿ ಕೊಳ್ಳೆಲೋ ಶ್ರೀನಿವಾಸ।" ಎಂಬ ಕೀರ್ತನೆಯನ್ನು ಸಮಗ್ರವಾಗಿ ನೋಡೋಣ.

**'ಬಿಡಿನೋ ನಿನ್ನಂಘ್ರಿ ಶ್ರೀನಿವಾಸ'**

**ಬಿಡೆನೋ ನಿನ್ನಂಘ್ರಿ ಶ್ರೀನಿವಾಸ ಎನ್ನ**
**ದುಡಿಸಿ ಕೊಳ್ಳೆಲೋ ಶ್ರೀನಿವಾಸ ನಿನ್ನ**
**ನುಡಿಯೇ ಜಿತಲ್ಲೊ ಶ್ರೀನಿವಾಸ ನನ್ನ**
**ನಡೆತಪ್ಪು ಕಾಯೋ ಶ್ರೀನಿವಾಸ ॥ ಪಲ್ಲ ॥**

**ಬಡಿಯೋ ಬೆನ್ನಲಿ ಶ್ರೀನಿವಾಸ ಎ –**
**ನ್ನೊಡಲ ಹೊಯ್ಯದಿರೊ ಶ್ರೀನಿವಾಸ ನಾ**
**ಬಡವ ಕಾಣೆಲೋ ಶ್ರೀನಿವಾಸ ನಿ –**
**ನ್ನೊಡಲ ಹೊಕ್ಕೆನೋ ಶ್ರೀನಿವಾಸ ॥ 1 ॥**

**ಪಂಜು ಪಿಡಿವೆನೋ ಶ್ರೀನಿವಾಸ ನಿ**
**ನ್ನೆಂಜಲ ಬಳದುಂಬೆ ಶ್ರೀನಿವಾಸ ನಾ**
**ಸಂಜೆ ಉದಯಕೆ ಶ್ರೀನಿವಾಸ ಕಾ –**
**ಳಂಜಿಯ ಪಿಡಿವೇ ಶ್ರೀನಿವಾಸ ॥ 2 ॥**

**ಸತ್ತಿಗೆ ಚಾಮರ ಶ್ರೀನಿವಾಸ ನಾ**
**ನೆತ್ತಿನಲಿವನೋ ಶ್ರೀನಿವಾಸ ನಿನ್ನ**
**ರತ್ನದ ಹಾವಿಗೆ ಶ್ರೀನಿವಾಸ ನಾ**
**ಹೊತ್ತು ಕುಣಿವೆನೋ ಶ್ರೀನಿವಾಸ ॥ 3 ॥**

**ಹೇಳಿದಂತಾಲಿಹೆ ಶ್ರೀನಿವಾಸ ನಿ –**
**ನ್ನಾಳಿಗಾಳಾಗಿಹೆ ಶ್ರೀನಿವಾಸ ಅವ –**
**ರೂಳಿಗವ ಮಾಳ್ಪೆ ಶ್ರೀನಿವಾಸ ಎನ್ನ**
**ಪಾಲಿಸೊ ಬಿಡದೇ ಶ್ರೀನಿವಾಸ ॥ 4 ॥**

**ನಿನ್ನ ನಾಮ ಹೋಳಿಗೆ ಶ್ರೀನಿವಾಸ ಕಳ್ಳ –**
**ಕುನ್ನಿ ನಾನಾಗಿಹೆ ಶ್ರೀನಿವಾಸ ಕಟ್ಟಿ**
**ನಿನ್ನವರೊದ್ದರೆ ಶ್ರೀನಿವಾಸ ನನ್ನ**
**ಗಿನ್ನು ಲಜ್ಜೇತಕೆ ಶ್ರೀನಿವಾಸ ॥ 5 ॥**

**ಬೀಸಿಕೊಲ್ಲಲವರೆ ಶ್ರೀನಿವಾಸ ಮುದ್ರೆ**
**ಕಾಸಿ ಚುಚ್ಚಲವರೆ ಶ್ರೀನಿವಾಸ ಮಿಕ್ಕ**
**ಘಾಸಿಗಂಜೆನಯ್ಯ ಶ್ರೀನಿವಾಸ ಎಂಜ –**
**ಲಾಸೆಯ ಬಂಟ ನಾ ಶ್ರೀನಿವಾಸ ॥ 6 ॥**

**ಹೇಸಿ ನಾನಾದರೆ ಶ್ರೀನಿವಾಸ ಹರಿ –**
**ದಾಸರೊಳು ಪೊಕ್ಕೆ ಶ್ರೀನಿವಾಸ ಅವರ**
**ಭಾಷೆಯ ಕೇಳಿಹೆ ಶ್ರೀನಿವಾಸ ಆ –**
**ವಾಸಿಯ ಸೈರಿಸೊ ಶ್ರೀನಿವಾಸ ॥ 7 ॥**

**ತಿಂಗಳವನಲ್ಲ ಶ್ರೀನಿವಾಸ ವತ್ಸ–**
**ರಂಗಳವನಲ್ಲ ಶ್ರೀನಿವಾಸ ರಾ–**
**ಜಂಗಳ ಸವಡಿಪೆ ಶ್ರೀನಿವಾಸ ಭ–**
**ವಂಗಳ ದಾಟುವೆ ಶ್ರೀನಿವಾಸ ॥ 8 ॥**

**ನಿನ್ನವ ನಿನ್ನವ ಶ್ರೀನಿವಾಸ ನಾ–**
**ನನ್ಯವನರಿಯೆನೊ ಶ್ರೀನಿವಾಸ ಅಯ್ಯಾ**
**ಮನ್ನಿಸೊ ತಾಯ್ತಂದೆ ಶ್ರೀನಿವಾಸ ಪ್ರ–**
**ಸನ್ನವೆಂಕಟಾದ್ರಿ ಶ್ರೀನಿವಾಸ ॥ 9 ॥**

ಇದು ಪ್ರಸನ್ನವೆಂಕಟದಾಸರ ಹೃದಯಾಂತರಾಳದಿಂದ ಹೊರಹೊಮ್ಮಿದ ಸುಂದರ ಕೀರ್ತನೆ. ಇದರಲ್ಲಿ ಆತ್ಮಾರ್ಪಣೆ ಅಡಗಿದೆ; ಪ್ರಾರ್ಥನೆ ಅಡಗಿದೆ; ಸ್ತೋತ್ರ ಅಡಗಿದು ಇದು ಪ್ರಸನ್ನವೆಂಕಟದಾಸರ ಪಕ್ವಹೃದಯಕ್ಕೆ ಸಾಕ್ಷಿಯಾಗಿದೆ.

ದಾಸರು ಕೀರ್ತನೆಯಲ್ಲಿ ನಲವತ್ತುಬಾರಿ ಶ್ರೀನಿವಾಸನ ನಾಮವನ್ನು ನುಡಿದಿದ್ದಾರೆ. ಇದು ಪುನರುಕ್ತಿಯಲ್ಲ. ಒಂದೇ ಶಬ್ದವನ್ನು ಮತ್ತೆ ಮತ್ತೆ ಹೇಳುವುದರಿಂದ ಅದಕ್ಕೆ ಒತ್ತು ಕೊಟ್ಟಂತಾಗುತ್ತದೆ. ಅದರ ಪ್ರಾಶಸ್ತ್ಯದ ಕಡೆ ಗಮನಹರಿಯುತ್ತದೆ. ಇದರಿಂದ ಅದು ಅತ್ಯಂತ ಮಹತ್ವಪೂರ್ಣವಾದದ್ದಾಗಿ, ಅವಶ್ಯ ಚಿಂತಿಸಬೇಕಾದದ್ದಾಗಿ, ಜನ್ಮಧನ್ಯತೆಗೆ ಅವಶ್ಯಬೇಕಾದದ್ದಾಗಿ ತಿಳಿದು ಬರುತ್ತದೆ. ಭಗವಂತನ ನಾಮ ಸಂತತಚಿಂತಿಸಬೇಕಾದದ್ದು. "ಸಂತತಂ ಚಿಂತೆಯೇನಂತಂ" ಎಂದು ಹೇಳಿ ಆಚಾರ್ಯಮಧ್ವರು ಇದನ್ನು ಸಮರ್ಥಿಸಿರುವರು.

ಭಗವಂತನ ನಾಮಸ್ಮರಣೆಗೆ ಸಮಾನವಾದ ಯಜ್ಞವಿಲ್ಲ; ವ್ರತಗಳಿಲ್ಲ; ಧರ್ಮಗಳಿಲ್ಲ, ದಾನಗಳಿಲ್ಲ. ಭಗವನ್ನಾಮಸಂಕೀರ್ತನೆ, ಚಿಂತನೆ, ಸ್ಮರಣೆ, ಅನುಸಂಧಾನಗಳಿಲ್ಲದ ಎಲ್ಲ ಕರ್ಮಗಳು ಬಂಧಕಗಳೇ ಆಗುವವು. ನಾಮಸಂಕೀರ್ತನೆಯನ್ನು ಮಾಡುವ ವ್ಯಕ್ತಿಯು ಮಹಾಭಾಗ್ಯವಂತ. ಅವನ ಪುಣ್ಯಕ್ಕೆ ಈಡಿಲ್ಲ. ಅವನಿಗೆ ಯಮದೂತರು, ಯಮಧರ್ಮರಾಜ, ಯಮಲೋಕ ಇವು ಅತ್ಯಂತದೂರ. ನಾಮಕ್ಕಿರುವ ಮಹಿಮೆಯು ಅಸದೃಶ. ಈ ನಾಮ ಮಹಿಮೆಯಿಂದಲೇ ಪರಮಪಾಪಿಯಾದ ಅಜಾಮಿಳನು ಮೃತ್ಯುಪಾಶದಿಂದ ಮುಕ್ತನಾಗಿ, ಕೊನೆಗೆ ವೈಕುಂಠವನ್ನು ಸೇರಿದ. ಪ್ರಹ್ಲಾದ, ಗಜೇಂದ್ರ, ದ್ರೌಪದಿಮುಂತಾದವರು ಈ ನಾಮಸಂಕೀರ್ತನೆಯಿಂದಲೇ ಸಂಸಾರಸಾಗರವನ್ನು ಸುಲಭವಾಗಿ ದಾಟಿದರು. ಮಹರುದ್ರದೇವರು ರಾಮನಾಮವನ್ನು ನುಡಿಯುತ್ತ, ಸ್ಮರಿಸುತ್ತಾ ಆನಂದಸಾಗರದಲ್ಲಿ ಮುಳುಗಿರುವರು.

ಪುರಾಣಗಳು ನಾಮಮಹಾತ್ಮೆಯನ್ನು ಮುಕ್ತಕಂಠದಿಂದ ಹೊಗಳಿರುವವು. ಯಾರೇ ಆಗಲಿ, ಯಾವಸ್ಥಿತಿಯಲ್ಲೇ ಇರಲಿ, ಹ್ಯಾಗೇ ಇರಲಿ ಭಗವನ್ನಾಮಸಂಕೀರ್ತನೆ ಮಾಡಿದರೆ ಸಾಕು. ಅಂಥಾವ್ಯಕ್ತಿಯ ಎಲ್ಲ ಪಾಪಗಳು ಕ್ಷಣಾರ್ಧದಲ್ಲಿ ಸುಟ್ಟು ಭಸ್ಮವಾಗುವವು. ದುಃಖಗಳು ದೂರಾಗುವವು. ಕೈವಲ್ಯವು ಕೈವಶವಾಗುವುದು. ಮೇಲಿನ ಎಲ್ಲ ವಿಷಯಗಳನ್ನು ಆದಿತ್ಯ ಪುರಾಣವು ಈ ಕೆಳಕಂಡಂತೆ ಹೇಳಿ ಸ್ಪಷ್ಟಪಡಿಸಿದೆ.

**ಯಾತ್ರಾ ಯಜ್ಞಾ ವ್ರತಾ ಧರ್ಮಾ ದಾನಾನ್ಯನ್ಯಾನ್ಯಯಾ**
**ತವ ನಾಮಸ್ಮೃತೇರ್ಭಕ್ತ್ಯಾ ಕಲಾಂ ನಾರ್ಹಂತಿ ಷೋಡಶೀಮ್ ।**
**ಮಹಾತ್ಮ್ಯಂ ವಿಷ್ಣು ನಾಮ್ನೋಹಿ ವರ್ಣಿತುಂ ಕೇನಶಕ್ಯತೆ**
**ಅಜಾಮಿಲೋ ಮೃತ್ಯುಪಾಶಾತ್ ಮುಕ್ತೋ ವೈಕುಂಠಗೋ ಯತಃ ॥**
**ನೈಕೋ ಅಜಾಮಿಲ ಎವ ಪಾಪಜಲಧಿಂ ಸಂತೀರ್ಣವಾನ್ನಾಮತಃ**
**ಪ್ರಹ್ಲಾದೋಪಿ ಗಜೇಂದ್ರ ಪೂರ್ವ ಬಹವೋ ದುಃಖಾಂಬುಧೇಸ್ತಾರಿತಾಃ**
**ಯನ್ನಾಮಸ್ಮರಣಾಮೃತಾಬ್ಧಿ ನಿಮಗ್ನೋ ಅದ್ಯಾಪಿ ಗೌರೀಪತಿಃ**
**ಅಜ್ಞಾನಾದಥವಾ ದಂಭಾತ್ ಪುಣ್ಯಶ್ಲೋಕಸ್ಯ ನಾಮತೇ**
**ಯೋವದೇತ್ ತಾನಿ ನಶ್ಯಂತಿ ತೂಲರಾಶಿರ್ಯಥಾನಲಾತ್ ॥"**



ಜಗನ್ನಾಥದಾಸರು ಸಹ.

**"ಶ್ರೀಮುಕುಂದನ ಪರಮಮಂಗಳ**
**ನಾಮ ನರಕಸ್ಥರನು ಸಲಹಿತು**
**ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು"**

ಎಂದು ಹೇಳಿ, ಹರಿನಾಮಸಾಮರ್ಥ್ಯವನ್ನು ಸ್ಪಷ್ಟಪಡಿಸಿರುವರು. ಶ್ರೀನಿವಾಸನ ನಾಮಸಂಕೀರ್ತನೆಗೆ ದೇಶ – ಕಾಲ – ಅವಸ್ಥೆಗಳ ಅವಶ್ಯಕತೆ ಇಲ್ಲ. ಎಲ್ಲ ಕಾಲಗಳು, ಎಲ್ಲ ದೇಶಗಳು, ಎಲ್ಲ ಅವಸ್ಥೆಗಳು ನಾಮಸಂಕೀರ್ತನೆಗೆ ಅನುವಾದವುಗಳೇ. ವಿಷಯಗಳ ಸಂಪರ್ಕದಿಂದಲೋ, ದುಷ್ಟರ ಸಂಸರ್ಗದಿಂದಲೋ ಕಲುಷಿತಗಳಾದ ದೇಶಕಾಲಾವಸ್ಥೆಗಳು ಹರಿಸ್ಮರಣೆಯಿಂದ ಪವಿತ್ರವಾಗುವವು. ಹರಿಸ್ಮರಣೆ ಇಲ್ಲದೇ ಇದ್ದಲ್ಲಿ ಅವೇ ಅಪವಿತ್ರಗಳಾಗುವು. ಕಾರಣ ಸದಾಸಂಕೀರ್ತನೆಯಲ್ಲಿ ಕಾಲಕಳೆಯಬೇಕು. ನಾಮನೆನೆಯುವವನನ್ನು ಹರಿ ಒಡಲನೆಳಲಂದರದರಿ ಅನುಸರಿಸುವನು. ಅವನ ಹಿಂದೆ. ಮುಂದೆ ಎಡ ಬಲ ಒಳ ಹೊರಗಡೆಗಳಲ್ಲಿ ಇದ್ದು ರಕ್ಷಿಸುವನು. ಇದನ್ನೇ ಜಗನ್ನಾಥದಾಸರು.

**"ಮಲಗುವಾಗಲಿ ಏಳುವಾಗಲಿ**
**ಕುಳಿತು ಮಾತಾಡುತಲಿ ಮನೆಯೊಳು**
**ಕೆಲಸಗಳ ಮಾಡುತಲಿ ಮೈದೊಳೆವಾಗ ಮೆಲುವಾಗ ॥**
**ಕಲುಷದೂರನ ಸಕಲಠಾವಿಲಿ**
**ತಿಳಿಯೆ ತತ್ತನ್ನಾಮ ರೂಪವ**
**ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ ॥"**

ಎಂದು ಹೇಳಿ ವಿವರಿಸಿರುವರು. ಭಗವನ್ನಾಮಕ್ಕಿರುವ ಮಹಿಮೆ ಅಸದೃಶವಾದದ್ದು. ವಿಜಯದಾಸರು ತಮ್ಮ ಒಂದುಸುಳಾದಿಯಲ್ಲಿ ನಾರಾಯಣನಾಮಕ್ಕಿರುವ ಶಕ್ತಿಯನ್ನು ಬಹುಸುಂದರವಾಗಿ ವಿವರಿಸಿರುವರು.

**'ನಾ' ಎಂದು ನುಡಿಯಲು ನಾನಾ ನರಕನಾಶ ।**
**'ರಾ' ಎಂದು ಪೇಳಲು ರಾಯಪದವಿಯಕ್ಕು ।**
**'ಯ' ಎಂದು ವರ್ಣಿಸಲು ಎಲ್ಲ ಕಾಲದಲ್ಲಿ ।**
**ಶ್ರೇಯಸ್ಸಿನಲ್ಲಿ ಆನಂದಕ್ಕೆ ಅಭಿವೃದ್ಧಿ ।**
**'ಣ' ಎಂದದರ ಫಲವಾರು ಪೇಳುವರಯ್ಯ ।**
**ಭೂವ್ಯೋಮ ಪಾತಾಳ ಮಧ್ಯದಲ್ಲಿ ।**
**ರಾಯಾ ಮಹಿಷ್ವಾಸಾ ವಿಜಯವಿಠಲನ್ನ ।**
**ಗಾಯನ ಮಾಳ್ಪನ್ನ ಮತಿಗೆ ನಮೋ ನಮೋ ॥"**

ನಾರಾಯಣನಾಮಾಕ್ಷರಗಳ ಮಹಿಮೆಯನ್ನು ವಿಜಯದಾಸರಂತೆ ವರ್ಣಿಸಿದವರು ಮತ್ಯಾರೂ ಇಲ್ಲ. ನಾರಾಯಣನಾಮದಲ್ಲಿರುವ ನಾ ಎಂಬ ಮೊದಲನೆಯ ಅಕ್ಷರದ

ಉಚ್ಚಾರಣೆ ಮಾತ್ರದಿಂದ, ನರಕಗಳು ದೂರಾಗುವವು. ಅರ್ಥಾತ್ ತಿಳಿದೂ ತಿಳಿಯದೆ, ಕಾಯೇನ ವಾಚಾ ಮನಸಾ ಹಾಗೂ ದಶೇಂದ್ರಿಯಗಳಿಂದ ಮಾಡಿದ ನಿರ್ಬೀಜಸಬೀಜ ಪಾಪಗಳೆಲ್ಲ ನಾಶವಾಗುವವು. ಇದರಿಂದ ಸಾಧಕನು ಶುದ್ಧಾಂತಃಕರಣನಾಗಿ, ಜ್ಞಾನ–ವೈರಾಗ್ಯ ಭಕ್ತಿಗಳಿಂದ ಯುಕ್ತನಾಗಿ, ಬಿಂಬಾಪರೋಕ್ಷವನ್ನು ಹೊಂದಿ, ಪ್ರಾರಬ್ಧವನ್ನನುಭವಿಸಿ, ಜೀವನ್ಮುಕ್ತನಾಗುವನು. ಈ ಎಲ್ಲವು ಕೇವಲ 'ನಾ' ಅಕ್ಷರ ಉಚ್ಚಾರಣೆ ಮಾತ್ರದಿಂದ ಆಗುವುವು. ಇನ್ನು ರಾ ಎಂಬ ಎರಡನೆಯ ಅಕ್ಷರದ ಉಚ್ಚಾರಣೆ ಮಾತ್ರದಿಂದ ವೈಕುಂಠವೇ ದೊರೆಯುವುದು. ನಾರಾಯಣಮಹಾಮಂತ್ರದಲ್ಲಿರುವ "ಯ" ಅಕ್ಷರ ಉಚ್ಚಾರಮಂತ್ರದಿಂದ ಮುಕ್ತಿಯಲ್ಲಿ ಅನುಭವಿಸಬೇಕಾದ ಆನಂದವು ವೃದ್ಧಿಯಾಗುವುದು. ವಿಜಯದಾಸರು ಮುಕ್ತಿಯನ್ನು "ಶ್ರೇಯಸ್ಸಿನಲ್ಲಿ" ಎಂಬ ಶಬ್ದದಿಂದ ಹೇಳಿರುವರು. ಈ ಫಲದ ಮೇಲೆ ಮತ್ತೊಂದು ಫಲವಿಲ್ಲ. ಮುಕ್ತಿಸಾಮ್ರಾಜ್ಯದ ಆನಂದವೇ ಕೊನೆಯ ಆನಂದ.

ಇನ್ನು ಕೊನೆಯವದಾದ ನಾಲ್ಕನೆಯ "ಣ" ಕಾರದ ಉಚ್ಚಾರಣೆಗೆ ಫಲದ ವರ್ಣನೆ ದುಸ್ಸಾಧ್ಯ. ಅದರಿಂದಾಗಿ ವಿಜಯರಾಯರು. "ಣಾ ಎಂದದರ ಫಲವಾರು ಪೇಳುವರಯ್ಯಾ" ಎಂದು ಕೈ ಚಾಚಿರುವರು. ಹೀಗೆ ಭಗವಂತನ ನಾಮಸ್ಮರಣೆಯಿಂದ ದೊರೆಯುವ ಫಲ ಮಾತಿಗೆ ನಿಲುಕದ್ದು. ವಿಜಯದಾಸರು ಹರಿನಾಮದಿಂದ ಉದ್ಧೃತರಾದವರ ಒಂದು ದೊಡ್ಡ ಪಟ್ಟವನ್ನೇ, ತಮ್ಮ ಒಂದು ಸುಳಾದಿಯ ಧೃವತಾಳದಲ್ಲಿ ವಿವರಿಸಿರುವರು.

**ಹರಿನಾಮ ಪ್ರಹ್ಲಾದನ್ನ ಮೊರೆ ಕೇಳಿ ಒದಗಿತು**
**ಹರಿನಾಮ ಗಜೇಂದ್ರನ್ನ ಆ ವಿಪತ್ತು ಹರಿಸಿತು**
**ಹರಿನಾಮ ಅಜಾಮಿಳನ ಪಾಪ ಕೆಡಸಿತು**
**ಹರಿನಾಮ ನಾರದನ ನೀಚಯೋನಿ ಬಿಡಿಸಿತು**
**ಹರಿನಾಮ ಭೀಷ್ಮನ್ನ ಪಂಥವ ಗೆಲಿಸಿತು**
**ಹರಿನಾಮ ಅಂಬರೀಷನ್ನ ವ್ರತವ ಸಂರಕ್ಷಿಸಿತು**
**ಹರಿನಾಮ ವಿಭೀಷಣನನ್ನ ಪಟ್ಟದಲ್ಲಿಟ್ಟಿತು**
**ಹರಿನಾಮ ದ್ರೌಪದಿಯ ಮಾನವೆ ಕಾಯಿತು**
**ಹರಿನಾಮ ಧ್ರುವನ ತಪಸ್ಸಿಗೆ ಒಲಿಯಿತು**
**ಹರಿನಾಮ ಅಹಲ್ಯಾಶಾಪವ ಹಿಂಗಿಸಿತು**
**ಹರಿನಾಮ ಬಲಿನೃಪನ ಇಂದ್ರನ್ನ ಮಾಡಿತು**
**ಹರಿನಾಮ ಕುಚೇಲನ್ನ ದಾರಿದ್ರ್ಯ ಕಳೆಯಿತು**
**ಹರಿನಾಮ ವಿದುರನ್ನಕ್ಷೀರಕ್ಕೆ ಹಿಗ್ಗಿತು**
**ಹರಿನಾಮ ದೇವಕಿಯ ಬಂಧನ ಬಿಡಿಸಿತು**
**ಹರಿನಾಮ ಪ್ರಾರ್ಥನ್ನ ಜೀವವೇ ಉಳಿಸಿತು**
**ಹರಿನಾಮ ಜನಕನ್ನ ಧೃಢ ಮಾಡಿನೋಡಿತು**
**ಹರಿನಾಮ ಪುಂಡರೀಕನ ಭಕ್ತಿಗೆ ಮೆಚ್ಚಿತು**
**ಹರಿನಾಮ ಗುರುಪುತ್ರನ್ನ ತಿರುಗಿ ಬದುಕಿಸಿತು**
**ಹರಿನಾಮ ವಾಲ್ಮೀಕನ್ನ ಮುನಿಪನೆಂದೆನಿಸಿತು**



**ಹರಿನಾಮ ಭೂಮಿಯ ಉದ್ಧಾರಗೈಸಿತು**
**ಹರಿನಾಮ ಪರಿಪರಿ ಭಕ್ತರೊಡನಾಡಿತು**
**ಹರಿನಾಮ ಒಂದಿರಲು ಅನ್ಯಉಪಾಯವೇ?**
**ಹರಿನಾಮ ಸಮಸ್ತ ಭಯ ನಿವಾರಣವಯ್ಯ**
**ಹರಿನಾಮ ಮನಸ್ಸಿಗೆ ನಿರ್ಮಲಕಾರಣ**
**ಹರಿನಾಮ ಸರ್ವದೇವತೆಗಳಿಂದಧಿಕವು**
**ಹರಿನಾಮ ಜಗದೊಳು ಅಖಂಡವಾಗಿಪ್ಪದೋ**
**ಹರಿನಾಮ ಅಜಭವಾದಿಗಳಿಗೆ ಗತಿಪ್ರದ**
**ಹರಿನಾಮ ಮಹಿಮೆ ಆರು ಬಣ್ಣಿಪರಯ್ಯ**
**ಹರಿ ಹರಿ ಹರಿ ಎಂದು ನೆನೆದೊಡೆ ರೋಗಂಗಳು**
**ಉರುಳಿ ಹೋಗುವವು ನೀನು ಕೇಳೋಎಲೋ ಕೇಳೋ**
**ಹರಿನಾಮ ಸಕಲ ಪ್ರಾಯಶ್ಚಿತ್ತಕ್ಕೆ ಮೊದಲು**
**ಹರಿನಾಮವಿರಲಾಗಿ ಮತ್ತೊಂದಪೇಕ್ಷವೇ**
**ಹರಿನಾಮ ನಿಜಸ್ವಾಮಿ ವಿಜಯವಿಠ್ಠಲನಂಘ್ರಿ**
**ಪರಿಶುದ್ಧನಾಗಿ ಎಳ್ಳನಿತು ಮನದಲ್ಲಿಡೋ"**

ವಿಜಯದಾಸರಿಗೆ ಹರಿನಾಮವನ್ನು ಎಷ್ಟು ಬಾರಿ ಹೇಳಿದರು ತೃಪ್ತಿಯಾದಂತೆ ಕಾಣುವುದಿಲ್ಲ. ಮತ್ತೆ ಮತ್ತೆ ಹೇಳಿ, ಅದರ ಸಾರ್ಥಕತೆಯನ್ನು, ಅದರ ಅವಶ್ಯಕತೆಯನ್ನು, ಸ್ಪಷ್ಟ ಬಡಿಸಿರುವರು. ಹರಿದಾಸರ ರಚನಾಪದ್ಧತಿ ಪ್ರಾಯಃ ಒಂದೇ ಆಗಿರುತ್ತದೆ. ಇದಕ್ಕೆ ಕಾರಣ, ಅವರ ಹರಿಮಯವಾದ ಅವರಿಗಿರುವ ಮನಸ್ಸು, ಬುದ್ಧಿ, ಮತ್ತು ಆಚಾರ್ಯಮಧ್ವರ ಸಿದ್ಧಾಂತದಲ್ಲಿ ದೀಕ್ಷೆ. ಪ್ರಾಯಃ ವಿಜಯದಾಸರ ಈ ಸುಳಾದಿಗೆ, ಪ್ರಸನ್ನವೆಂಕಟದಾಸರ "ಬಿಡೆನೋ ನಿನ್ನಂಘ್ರಿ ಶ್ರೀನಿವಾಸ" ಎಂಬ ಕೀರ್ತನೆಯೇ ಪ್ರಚೋದನೆಯನ್ನು ನೀಡಿರಲು ಸಾಧ್ಯ.

ಆಚಾರ್ಯಮಧ್ವರು "ಕೃಷ್ಣಾಮೃತಮಹಾರ್ಣವದಲ್ಲಿ ಹರಿನಾಮಮಹಿಮೆ"ಯನ್ನು, ಅದರ ಅವಶ್ಯಕತೆಯನ್ನು, ಅದರಿಂದ ದೊರೆಯ ಬದುದಾದ ಫಲಗಳ ಪರಂಪರೆಯನ್ನು, ವಿಸ್ತಾರವಾಗಿ ವರ್ಣಿಸಿರುವರು.

ಪ್ರಸನ್ನವೆಂಕಟದಾಸರು, ಆಚಾರ್ಯರು ತೋರಿದ ಮಾರ್ಗದಲ್ಲಿ ನಡೆಯುತ್ತ, "ಶ್ರೀನಿವಾಸನಾಮಾಮೃತಪಾನದಿಂದ ಮತ್ತರಾಗಿ, ಪುಲಕಿತಗಾತ್ರರಾಗಿ, ಪ್ರಕೃತಕೃತಿಯಲ್ಲಿ ಪ್ರತಿಚರಣಕ್ಕೆ ನಾಲ್ಕರಂತೆ, ಹತ್ತುಚರಣಗಳಿಗೆ ಸೇರಿ ನಲವತ್ತುಬಾರಿ ಶ್ರೀನಿವಾಸನ ನಾಮವನ್ನು ನುಡಿದಿರುವರು.

ಈ ನಲವತ್ತುಬಾರಿ ಮಾಡಿದ ಶ್ರೀನಿವಾಸನಾಮಸಂಕೀರ್ತನೆಯ ಹಿನ್ನೆಲೆಯಲ್ಲಿ, ಪ್ರಸನ್ನವೆಂಕಟದಾಸರು ಒಂದು ಅಪೂರ್ವಪ್ರಮೇಯವನ್ನು ಪರಿಚಯಿಸಿರುವರು.

ಸೃಷ್ಟಿಗೆ ಬಂದ ಪ್ರತಿಜೀವಿ ಮೊಟ್ಟಮೊದಲು ತ್ರಿಗುಣಗಳಿಂದ ಬಂಧಿತನಾಗುವನು. ಇದನ್ನೇ ಲಿಂಗಶರೀರವೆಂದು ಹೇಳಬಹುದು. ಈ ತ್ರಿಗುಣಗಳ ವಿಕಾರಗಳೇ ಅವ್ಯಕ್ತಾದಿ

ಇಪ್ಪತ್ತುನಾಲ್ಕುತತ್ವಗಳು. ಈ ತತ್ವಗಳೇ ಎರಡನೆಯ ಬಂಧಕಗಳು. ಈ ತ್ರಿಗುಣಗಳ ಹಾಗೂ ಇಪ್ಪತ್ತುನಾಲ್ಕುತತ್ವಗಳ ಬಂಧನದಿಂದ ಜೀವಿ ಪ್ರಾರಂಭದಲ್ಲಿ ಅರಿಷಡ್ವರ್ಗಗಳಿಗೆ ಗುರಿಯಾಗುವನು. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೇ ಅರಿಷಡ್ವರ್ಗಗಳು. ಈ ಅರಿಷಡ್ವರ್ಗಗಳ ಪ್ರಭಾವದಿಂದ ಜೀವಿ ಪಾಪಕರ್ಮಗಳನ್ನು ಆಚರಿಸುತ್ತಾ ಹೋಗುವನು. ಪಾಪಕರ್ಮದಿಂದ ಪಾಪವು ಸಂಘಟಿಸುವದು. ಪಾಪಗಳಲ್ಲಿ ಪ್ರಸಿದ್ಧಗಳಾದ, ಮಹಾಬಂಧಕಗಳಾದ ಪಾಪಗಳು ಐದು. ಅವನ್ನೇ ಜ್ಞಾನಿಗಳು ಪಂಚಮಹಾಪಾತಕಗಳೆಂದು ಕರೆಯುವರು. ಇದರಿಂದಾಗಿ ಜೀವಿ ಹುಟ್ಟುಸಾವುಗಳ ಸಂಕೋಲೆಗೆ ಸಿಲುಕಿ ಬಳಲುವನು. ಈ ಎಲ್ಲ ಬಂಧನಗಳಿಂದ ಬಿಡುಗಡೆ ಭಗವನ್ನಾಮ ಸಂಕೀರ್ತನೆಯಿಂದ.

| | |
|---|---|
| ತ್ರಿಗುಣಗಳು | 3 |
| ತತ್ವಗಳು | 24 |
| ಅರಿಷಡ್ವರ್ಗಗಳು | 6 |
| ಪಂಚಮಹಾಪಾತಗಳು | 5 |
| ಹುಟ್ಟುಸಾವುಗಳು | 2 |
| | **40** |

ಈ ನಲವತ್ತರ ಬಂಧನದಿಂದ ಬಿಡುಗಡೆ, ಶ್ರೀನಿವಾಸನಾಮಸ್ಮರಣೆಯಿಂದ ಎಂದು ಸೂಚಿಸುವುದಕ್ಕಾಗಿಯೇ, ದಾಸಾರ್ಯರು ಕೀರ್ತನೆಯಲ್ಲಿ ಶ್ರೀನಿವಾಸನ ನಾಮವನ್ನು 40 ಬಾರಿ ನುಡಿದಿರುವರು. ಸಂತತ ಶ್ರೀನಿವಾಸನ ನಾಮಸಂಕೀರ್ತನೆಯಿಂದ ಮೊಟ್ಟಮೊದಲು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ದೂರಾಗುವವು. ಅರಿಷಡ್ವರ್ಗಗಳಿಂದ ದೂರಾದ ಜೀವಿ ಯಾವ ತರಹದ ಪಾಪಗಳನ್ನು ಆಚರಿಸುವುದಿಲ್ಲ. ಅವನು ಪಾಪದಿಂದ ದೂರಾಗಿ, ಭಗವತ್ಸಂಬಂಧವಾದ ಮತ್ತು ಭಗವತ್ ಪ್ರಜ್ಞೆಯನ್ನು ಬೆಳೆಸುವ ಪುಣ್ಯಕರ್ಮಗಳನ್ನೇ ಭಗವತ್ ಪ್ರೇರಣೆಯಿಂದ ಸದಾ ಮಾಡುವನು. ಇದರಿಂದ ಬಂಧಕಗಳಾದ ತ್ರಿಗುಣಗಳಾಗಲಿ, ತ್ರಿಗುಣಜನ್ಯಗಳಾದ 24 ತತ್ವಗಳಾಗಲಿ, ಇವನಿಗೆ ಬಂಧಕಗಳಾಗದೆ, ಸತ್‌ಸಾಧನೆಗೆ ಅನುವಾಗುವವು. ಅರಿಷಡ್ವರ್ಗಗಳ ಬಲೆಗೆ ಸಿಕ್ಕ ಜೀವಿ, ನಯನೇಂದ್ರಿಯದಿಂದ (ಕಣ್ಣು) ಕೇವಲ ಪ್ರಪಂಚದ ವಸ್ತುಗಳನ್ನು ನೋಡಿದರೆ ಅರಿಷಡ್ವರ್ಗಗಳ ಬಲೆಯಿಂದ ಹೊರಬಂದ ಜೀವಿಯು, ಪ್ರಪಂಚದ ಪದಾರ್ಥಗಳನ್ನು ನೋಡುತ್ತಾ, ಅವುಗಳ ಅಂತರ್ಯಾಮಿಯಾದ. ಭಗವಂತನನ್ನು ಸಹ ಕಂಡು ಹಿಗ್ಗುವನು. ಇದರಂತೆ ಅವನ ಉಳಿದ ಇಂದ್ರಿಯಗಳು ಸಹ ಭಗವತ್ಪರಗಳಾಗಿ ಧನ್ಯತೆಯನ್ನು ಹೊಂದುತ್ತವೆ. ಕೊನೆಯಲ್ಲಿ ಜನನ ಮರಣಗಳಿಂದ ದೂರಾಗಿ ಮುಕ್ತನಾಗುವನು. ಈ ಅಪೂರ್ವಪ್ರಮೇಯವನ್ನು ಶ್ರೀನಿವಾಸನ ನಾಮಾವಳಿಗಳನ್ನು ಪುನಃ ಪುನಃ ಉಚ್ಚರಿಸುವುದರಿಂದ ಸೂಚಿಸಿದ ಪ್ರಸನ್ನವೆಂಕಟದಾಸರು, ಕೀರ್ತನೆಯನ್ನು ಪ್ರಾರಂಭಿಸುತ್ತಾ ಪ್ರಾರಂಭದಲ್ಲಿ **"ಬಿಡೆನೋ ನಿನ್ನಂಘ್ರಿ ಶ್ರೀನಿವಾಸ"** ಎಂದು ಹೇಳಿ ತಮ್ಮ ದೀಕ್ಷೆಯನ್ನು ಪ್ರಕಟಿಸಿರುವರು.

ಪಲ್ಲವಿಯ ಪ್ರಾರಂಭದ ಈ ಪಾದದಲ್ಲಿ ದಾಸಾರ್ಯರು "ಶ್ರೀನಿವಾಸನೇ! ನಿನ್ನ ಅಂಘ್ರಿಯನ್ನು ನಾ ಬಿಡುವುದಿಲ್ಲ" ಎನ್ನುತ್ತಾರೆ. ಇಲ್ಲಿ ಅಂಘ್ರಿ ಮತ್ತು ಶ್ರೀನಿವಾಸ ಶಬ್ದಗಳು



ಪರಸ್ಪರ ಪೂರಕಗಳು. ಪ್ರಪಂಚದಲ್ಲಿ ಪ್ರಾಯಃ ಮಾನವರೆಲ್ಲರೂ ಸಂಪತ್ತಿಗೆ ಪರವಶರಾಗುವರು. ಸಂಪತ್ಸಂಪಾದನೆಗಾಗಿ ಸತತ ಪ್ರಯತ್ನಿಸುವರು. ಸಂಪತ್ತು ಎರಡುವಿಧ; ಒಂದು ಲೌಕಿಕ, ಮತ್ತೊಂದು ಪಾರಮಾರ್ಥಿಕ. ಲೌಕಿಕ ಸಂಪತ್ತು ಆದಿಯಲ್ಲಿ ಸುಖದಂತೆ ಕಂಡರೂ, ಕೊನೆಯಲ್ಲಿ ದುಃಖದಾಯಕ. ಎರಡನೇಯದಾದ ಪಾರಮಾರ್ಥಿಕಸಂಪತ್ತು ಸದಾಸುಖದಾಯಕ; ನಿತ್ಯಸುಖದಾಯಕ; ಅಸದೃಶಸುಖದಾಯಕ. ಇದನ್ನು ಮನಗಂಡವರು ಪ್ರಸನ್ನವೆಂಕಟದಾಸರು. ಶ್ರೀನಿವಾಸನ ಪಾದಗಳು ಸಂಪದ್ಯುಕ್ತಗಳು. ಇದರ ಸೂಚನೆಗಾಗಿಯೇ ದಾಸಾರ್ಯರು ಅಂಘ್ರಿ ಶಬ್ದವನ್ನು, ಶ್ರೀನಿವಾಸ ಶಬ್ದವನ್ನು, ಪಕ್ಕಪಕ್ಕದಲ್ಲಿ ಹಾಕಿರುವರು. ಈ ಎರಡು ಶಬ್ದಗಳನ್ನು ವ್ಯಸ್ತಶಬ್ದಗಳನ್ನಾಗಿಯೂ ನೋಡಬಹುದು, ಸಮಸ್ತಪದವನ್ನಾಗಿಯೂ ಗುರುತಿಸಬಹುದು. ಸಮಸ್ತಪದವನ್ನಾಗಿ ಚಿಂತಿಸಿದಾಗ, ಶ್ರೀನಿವಾಸಶಬ್ದವು ಅಂಘ್ರಿಶಬ್ದಕ್ಕೆ ವಿಶೇಷಣವಾಗುವುದು. ಆಗ ಶ್ರೀನಿವಾಸನ ಪಾದವು 'ಶ್ರೀ'ಗೆ ಅರ್ಥಾತ್ ಸಂಪತ್ತಿಗೆ ಆವಾಸ ಸ್ಥಾನವಾಗಿದೆ ಎಂಬ ಅರ್ಥವು ವ್ಯಕ್ತವಾಗುವುದು. ಶ್ರೀಎಂದರೆ ಸಂಪತ್ತು. ಗುಣ–ರೂಪಗಳು ಭಗವಂತನ ನಿಜವಾದ ಸಂಪತ್ತುಗಳು. ಮಹಾಲಕ್ಷ್ಮೀಯು ಅವನ ಸಂಪತ್ತು. ಚೇತನಾಚೇತನಾತ್ಮಕವಾದ ಪ್ರಪಂಚವೆಲ್ಲ ಅವನ ಸಂಪತ್ತೆ. ಶ್ವೇತದ್ವೀಪ – ವೈಕುಂಠ – ಅನಂತಾಸನಗಳು ಅವನಸಂಪತ್ತುಗಳೇ. ಈ ಎಲ್ಲ ಸಂಪತ್ತುಗಳು ಭಗವಂತನ ಪಾದದಲ್ಲೆ ಇವೆ. ಭಗವಂತನ ಪಾದಗಳನ್ನು ಬಿಡದೆ ಗಟ್ಟಿಯಾಗಿ ಹಿಡಿದುಕೊಂಡಲ್ಲಿ, ಮೇಲಿನ ಎಲ್ಲ ಸಂಪತ್ತುಗಳು ತಾವಾಗಿಯೇ ದೊರೆಯುವವು. ಅದಕ್ಕಾಗಿಯೇ ಪ್ರಸನ್ನವೆಂಕಟದಾಸರು "ಶ್ರೀನಿವಾಸ! ನಿನ್ನ ಕರುಣೆ ಎಂಬ ಗುಣಸಂಪತ್ತು ನನಗೆ ದೊರೆಯಬೇಕು. ಸಕಲ ವೇದಗಳಿಗೆ ಅಭಿಮಾನಿಯಾಗಿ, ವಿದ್ಯಾಧಿದೇವತೆಯೆಂದು ಪ್ರಸಿದ್ಧಳಾದ ಮಹಾಲಕ್ಷ್ಮಿಯ ಅನುಗ್ರಹ ಸಂಪತ್ತು ಸಹ ನನಗೆ ದೊರೆಯಬೇಕು. ರಮಾತ್ಮಕಗಳೂ, ಸಂಪತ್ಸ್ವರೂಪಗಳು ಆದ ನಿನ್ನ ನಿಜವಾದ ಸಂಪತ್ತುಗಳು ಎನಿಸಿರುವ – ಶ್ವೇತದ್ವೀಪ –ಅನಂತಾಸನ – ವೈಕುಂಠಗಳೆಂಬ ಲೋಕರೂಪಸಂಪತ್ತುಗಳು ನನಗೆ ದೊರೆಯಬೇಕು. ಇವುಗಳ ಪ್ರಾಪ್ತಿಗಾಗಿ ನಿನ್ನ ಪಾದಗಳನ್ನು ಹಿಡಿದಿರುವೆನು. ಅವುಗಳನ್ನು ಎಂದಿಗೂ ಬಿಡುವುದಿಲ್ಲ. ಎಂದು ಹೇಳಿರುವರು.

ಜೀವಿ ಅಸ್ವತಂತ್ರ ಎನ್ನುವದು ತ್ರಿಕಾಲಸತ್ಯ. ಶ್ರೀಹರಿ ಒಬ್ಬನೇ ಸರ್ವತಂತ್ರಸ್ವತಂತ್ರ. "ಸ್ವತಂತ್ರನಾತನು ಸರ್ವದ ಶ್ರೀಹರಿ – ಅತಂತ್ರಜೀವರನುಗಾಲ ಕೋಲೆ". ದಾಸರು "ಶ್ರೀನಿವಾಸ ನಿನ್ನ ಅಂಘ್ರಿ ಬಿಡೆನೋ" ಎಂದು ಹೇಳಿ ತಮ್ಮಲ್ಲಿ ಸ್ವಾತಂತ್ರ್ಯವನ್ನು ಆಪಾದಿಸಿಕೊಂಡಂತೆ ಕಾಣುವುದು. ಶ್ರೀನಿವಾಸ ಶಬ್ದವನ್ನು ಮತ್ತೊಂದು ಅರ್ಥದಲ್ಲಿ ಚಿಂತಿಸಿದಾಗ ಇದಕ್ಕೆ ಅವಕಾಶವಿರುವದಿಲ್ಲ. ಶ್ರೀನಿವಾಸ! ಎಂದು ಸಂಭೋದಿಸಿದ ದಾಸಾರ್ಯರು, ಈ ಶಬ್ದದಿಂದಲೇ ತಮ್ಮ ಅಸ್ವತಂತ್ರತೆಯನ್ನು, ಶ್ರೀನಿವಾಸ ಪ್ರಭುವಿನ ಸರ್ವತಂತ್ರ ಸ್ವತಂತ್ರತೆಯನ್ನು ಸ್ಪಷ್ಟಪಡಿಸಿರುವರು. ಶ್ರೀ ಶಬ್ದವು ಇಂದ್ರಿಯವಾಚಕ.

**"ತಾ ಏತಾಹ ಶೀರ್ಷಇಟ್ರಿಯಃ ಶ್ರಿತಾಶಚಕ್ಷುಃ**
**ಶ್ರೋತ್ರಂ ಮನೋವಾಕ್ ಪ್ರಾಣಃ ಶ್ರಯಂತೇ ಸ್ಮಿಂಟ್ರಿಯಃ"**

ಇದು ಐತರೇಯಉಪನಿಷತ್ತಿನ ವಚನ. ಕಣ್ಣು, ಕಿವಿ, ಮನಸ್ಸು ವಾಕ್ ಪ್ರಾಣ ಇವುಗಳು 'ಶ್ರೀ' ಶಬ್ದದಿಂದ ಹೇಳ್ಪಡುತ್ತವೆ. ಇಂಥ ಶ್ರೀ ಶಬ್ದದಿಂದ ಹೇಳ್ಪಡುವ ಇಂದ್ರಿಯಗಳಲ್ಲಿ

ಸದಾವಾಸಮಾಡುವನಾದ ಕಾರಣ, ಭಗವಂತನಿಗೆ ಶ್ರೀನಿವಾಸ ಎಂದು ಹೆಸರು. ಶ್ರೀಷು ಇಂದ್ರಿಯೇಷು ನಿತರಾಂ ವಸತಿ ಇತಿ ಶ್ರೀನಿವಾಸಃ ಇಂದ್ರಿಯಗಳಲ್ಲಿ ಭಗವಂತನು ವ್ಯರ್ಥವಾಗಿ ವಾಸಮಾಡುವುದಿಲ್ಲ. ಇಂದ್ರಿಯಗಳಲ್ಲಿದ್ದು, ಇಂದ್ರಿಯಾಭಿಮಾನಿದೇವತೆಗಳಿಗೆ ಪ್ರೇರಣೆ ನೀಡಿ, ಜೀವಿಯ ಯೋಗ್ಯತೆಗೆ ಅನುಗುಣವಾಗಿ, ಇಂದ್ರಿಯಗಳ ವ್ಯಾಪಾರಗಳನ್ನು ಮಾಡಿಸುವವನು. ಈ ಪ್ರಮೇಯ ಬಲ್ಲ ಪ್ರಸನ್ನವೆಂಕಟದಾಸರು "ಶ್ರೀನಿವಾಸ! ನನ್ನ ಮನಸ್ಸೆಂಬ ಇಂದ್ರಿಯಕ್ಕೆ ಪ್ರೇರಕನಾದ ನೀನೆ" ಅಸ್ವತಂತ್ರನಾದ ನನ್ನ ಮನಸಿಗೆ ಪ್ರೇರಣೆ ನೀಡಿ, ನಿನ್ನ ಪಾದವನ್ನು ಬಿಡದೆ ಹಿಡಿಯಲು ಆದೇಶಿಸುತ್ತಿರುವಿ. ನಿನ್ನ ಆದೇಶಕ್ಕೆ ಅನುಗುಣವಾಗಿಯೇ ನಾನು 'ಬಿಡೆನೋ ನಿನ್ನಂಘ್ರಿ ಶ್ರೀನಿವಾಸ' ಎಂದು ಹೇಳಿರುವೆನು. ಹುಲುಮಾನವನಾದ ನನಗೆ ಸ್ವಾತಂತ್ರ್ಯ ಎಲ್ಲಿಯದು? ಒಬ್ಬನಲಿ ನಿಂತಾಡುವವನು, ಮತ್ತೊಬ್ಬನಲಿ ನೋಡುವವನು, ಒಬ್ಬನಲಿ ಬೇಡುವವನು, ಮತ್ತೊಬ್ಬನಲಿ ನೀಡುವವನು, ಬೆರಗಾಗಿ ಮಾತನಾಡುವವನು ನೀನೆ!. ನೀನು ಅಬ್ಬರದ ಹೆದ್ದೈವ. ಎಲ್ಲಕ್ಕೂ ನೀನೇ ಮೂಲ ಕಾರಣ.

'ಬಿಡೆನೋ' ಎಂಬ ಶಬ್ದದ ಕೊನೆಯಲ್ಲಿರುವ ದೀರ್ಘವು, ಪ್ರಸನ್ನವೆಂಕಟದಾಸರ ನಿಶ್ಚಯವನ್ನು ಧೃಡತೆಯನ್ನು ಪ್ರಕಟಿಸುತ್ತಿರುವುದು. ಈ ದೃಢತೆ ಹಾಗೂ ನಿಶ್ಚಯಗಳಿಗೆ ಕಾರಣ ಪಾದದಲ್ಲಿರುವ ಸಂಪತ್ತುಗಳು ಮೊದಲನೆಯವಾದರೆ, ಪಾದದಲ್ಲಿರುವ ಸೌಂದರ್ಯವು ಎರಡನೆಯದು. ಶ್ರೀನಿವಾಸನ ಪಾದ ಸೌಂದರ್ಯಕ್ಕೆ ಎಲ್ಲ ದೇವತೆಗಳು ಮೋಹಿತರಾಗಿದ್ದಾರೆ. ಜಗನ್ನಾಥನ ಪಾದದ ಅದ್ಭುತಸೌಂದರ್ಯವನ್ನು ಕಂಡ ಜಗನ್ಮಾತೆಮಹಾಲಕ್ಷ್ಮಿ ಶ್ರೀ ಭೂದುರ್ಗಾ ರೂಪಗಳಿಂದ ಪಾದಸೌಂದರ್ಯವನ್ನು ಆಸ್ವಾದಿಸುತ್ತಿರುವಳು. ನಾಲ್ಕು ಮುಖಗಳುಳ್ಳ ಪರಮೇಷ್ಟಿ ಪರಮಾತ್ಮನ ಪಾದದಸೌಂದರ್ಯಾಸ್ವಾದನೆಗೆ ನಾಲ್ಕುಮುಖಗಳಲ್ಲಿ ಎಂಟು ಕಣ್ಣುಗಳು ಸಾಕಾಗವೆಂದು, ಅನೇಕರೂಪಗಳಿಂದ ಸೌಂದರ್ಯಾಸ್ವಾದನೆಯಲ್ಲಿ ತೊಡಗಿರುವನು. ಸಹಸ್ರವದನನಾದ ಶೇಷನು ತನ್ನ ಸಾವಿರಸಾವಿರಕಣ್ಣುಗಳಿಂದ ಸ್ವಾಮಿಯ ಪಾದ ಸೌಂದರ್ಯವನ್ನು ಅಸ್ವಾದಿಸುತ್ತಾ, ಮಹಾನಂದಸಾಗರದಲ್ಲಿ ಮುಳುಗಿರುವನು. ಈ ಎಲ್ಲ ವಿಷಯಗಳನ್ನು ಆದಿತ್ಯಪುರಾಣಾಂತರ್ಗಣಾ ವೆಂಕಟೇಶಮಹಾತ್ಮೆಯು ಸ್ಪಷ್ಟಪಡಿಸುತ್ತಿರುವದು.

**ವಕ್ಷಸ್ಥಾಪಿ ರಮಾದೇವಿ ತವ ಪಾದಾಂಬುಜೇ ಸ್ಥಿತಂ ।**
**ಸೌಂದರ್ಯಮದ್ಭುತಂ ದೃಷ್ಟ್ವಾ ಸುಂದರೀ ಮೋಹಿತಾ ಅಭವತ್ ।**
**ಶ್ರೀಸುಂದರ ಶ್ರೀನಿವಾಸ ನಾಭಿಸ್ಥಃ ಚತುರಾನನಃ ।**
**ತವ ಪಾದಾಂಬುಜೆ ರಮ್ಯೆ ಸೌಂದರ್ಯೇ ಲಗ್ನಮಾನಸಃ ।**
**ಅಷ್ಟ ನೇತ್ರ್ಯಾ ದಿವಾರಾತ್ರಂ ಪಶ್ಯನ್ ಸೌಂದರ್ಯಮದ್ಭುತಂ ।**
**ನಾಲಂ ನೇತ್ರಾಷ್ಟಕಮಿತಿ ಬಹುರೂಪಿ ತದಾಭವತ್ ।**
**ಶೇಷೋ ಬಹುಸಹಸ್ರಾಕ್ಷಃ – – ಸರ್ವದಾತಿ ಪ್ರಿಯೋ ಹರೇಃ ।**
**ನೇತ್ರೈಃ ಬಹುಸಹಸ್ರೈಶ್ಚ ಲಕ್ಷ್ಮೀಪತಿಪದಾಂಬುಜೇ**
**ಅಸಮಂ ಚಿತ್ರಸೌಂದರ್ಯಂ ದೃಷ್ಟ್ವಾದೃಷ್ಟ್ವಾ ಪುನಃ ಪುನಃ ।**
**ಮಹಾನಂದಾ ಬುಧೌ ಮಗ್ನಃ..................................**



ಮೊದಲನೇ ಪಾದದಲ್ಲಿ 'ಶ್ರೀನಿವಾಸ' ಶಬ್ದದಿಂದ ತಮ್ಮ ಅಸ್ವತಂತ್ರತೆಯನ್ನು ಧ್ವನ್ಯರ್ಥದಲ್ಲಿ ಪ್ರಕಟಿಸಿದ ದಾಸಾರ್ಯರು, "ಎನ್ನ ದುಡಿಸಿಕೊಳ್ಳೆಲೋ ಶ್ರೀನಿವಾಸ' ಎಂಬ ಎರಡನೇ ಪಾದದಿಂದ ಜೀವರು ಅಸ್ವತಂತ್ರರು ಎಂಬ ಪ್ರಮೇಯನ್ನು ವಾಚ್ಯವಾಗಿ ಹೇಳುತ್ತಿರುವರು. ಹಾಗೆಯೇ ಈ ಪಾದದಿಂದ, ಜೀವಪರಮಾತ್ಮರ ಮಧ್ಯದಲ್ಲಿರುವ ದಾಸಈಶಭಾವ–ಪ್ರಮೇಯವನ್ನು ಸಹ ಸ್ಪಷ್ಟಬಡಿಸುತ್ತಿರುವರು. ಭಗವಂತನು ಜೀವಿಯ ಇಂದ್ರಿಯಳಿಗೆ ಪ್ರೇರಣೆ ನೀಡಿ, ತನ್ನ ಸೇವೆಯನ್ನು ಮಾಡಿಸಿಕೊಂಡರೆ ಮಾತ್ರ, ಅವನ ಸೇವಾಭಾಗ್ಯವು ದೊರೆಯುವುದು.ಆಪ್ರಭು ಸಾಧಕರು ಕಣ್ಣಲ್ಲಿ ನಿಂತು ತನ್ನ ಆಕೃತಿಯನ್ನು ನೋಡಿಸಬೇಕು. ಕಿವಿಯಲ್ಲಿ ನಿಂತು ತನ್ನಕಥೆ ಕೇಳಿಸಬೇಕು. ಮೂಗಿನಲ್ಲಿ ನಿಂತು ಅಶ್ವಿನೀದೇವತೆಗಳ ದ್ವಾರಾ ತನ್ನ ನಿರ್ಮಾಲ್ಯವನ್ನು ಆಘ್ರಾಣಿಸುವಂತೆ, ನಾಲಿಗೆಯಲ್ಲಿ ನಿಂತು ತನ್ನ ಪ್ರಸಾದವನ್ನು ಸ್ವೀಕರಿಸುವಂತೆ, ಬಾಯಿಯಲ್ಲಿ ನಿಂತು ತನ್ನ ನಾಮಸಂಕೀರ್ತನೆ ಮಾಡುವಂತೆ, ಕೈಗಳಲ್ಲಿ ನಿಂತು ತನ್ನ ಪೂಜೆಮಾಡುವಂತೆ, ಕಾಲುಗಳಲ್ಲಿ ನಿಂತು ತನ್ನ ಕ್ಷೇತ್ರ ತೀರ್ಥಗಳಿಗೆ ನಡೆಯುವಂತೆ, ಪ್ರದಕ್ಷಿಣೆನಮಸ್ಕಾರಗಳನ್ನು ಮಾಡುವಂತೆ ಮಾಡಿಸಬೇಕು. ಇದನ್ನು ಬಲ್ಲದಾಸರು "ಶ್ರೀನಿವಾಸಾ! ನನ್ನನ್ನು ನಿನ್ನ ಸೇವಕನನ್ನಾಗಿ ಅಂಗೀಕರಿಸಿ ನನ್ನನ್ನು ದುಡಿಸಿಕೊ" ಎಂದು ಪ್ರಾರ್ಥಿಸುತ್ತಿರುವರು. ದುಡಿಯುವವನು (ಸೇವೆಮಾಡುವವನು) ಸದಾ ಸೇವಕನಾಗುತ್ತಾನೆ. ದುಡಿಸಿಕೊಳ್ಳುವವನು ಈಶನಾಗುತ್ತಾನೆ. ಜೀವಪರಮಾತ್ಮರ ಮಧ್ಯದಲ್ಲಿರುವ ಈ ದಾಸಈಶಭಾವವು ಅನಾದಿಸಿದ್ಧವಾದದ್ದು. ಶಾಶ್ವತವಾದದ್ದು. ಜೀವಿ ತಾನು ಭಗವಂತನ ದಾಸನೆಂಬುದನ್ನು ಮರೆತಿರುತ್ತಾನೆ. ಇದನ್ನು ಭಗವಂತನೇ ಕರುಣಿಸಬೇಕು. ಇದನ್ನು ಚೆನ್ನಾಗಿ ಬಲ್ಲ ಪುರಂದರದಾಸರು.

**"ದಾಸನ್ನ ಮಾಡಿಕೊ ಎನ್ನ ಸ್ವಾಮಿ**
**ಸಾಸಿರನಾಮದ ವೇಂಕಟರಮಣ"** ಎಂದು ಪ್ರಾರ್ಥಿಸಿರುವರು.

"ನಿನ್ನ ನುಡಿಯೇ ಜಿತಲ್ಲೊ ಶ್ರೀನಿವಾಸ" ಎನ್ನುವುದು ಮೂರನೆಯ ಪಾದ. ಇಲ್ಲಿ ಪಾಠಾಂತರಗಳಿವೆ. "ಜಿತಲ್ಲೋ" ಎನ್ನುವ ಪಾಠವು ಒಂದಾದರೆ, ಇಂದು ಪ್ರಿಂಟಾದ ಪುಸ್ತಕಗಳಲ್ಲಿರುವ ಪಾಠ "ಜೀತಲ್ಲೋ" ಎನ್ನುವುದು. ಜಿತಲ್ಲೋ ಶಬ್ದಕ್ಕೆ ದೃಢವಲ್ಲವೇ, ನಿಶ್ಚಯವಲ್ಲವೇ ಎಂಬ ಅರ್ಥಗಳಿವೆ. 'ಜೀತ ಶಬ್ದಕ್ಕೆ ಕೋಶದರೀತ್ಯಾ ಸಂಬಳ ಎಂದು ಅರ್ಥ.

ಎರಡನೇ ಪಾದದಲ್ಲಿ ದಾಸರು "ಶ್ರೀನಿವಾಸ ನನ್ನನ್ನು ದಾಸನನ್ನಾಗಿ ಮಾಡಿಕೋ" ಎಂದು ಪ್ರಾರ್ಥಿಸಿರುವರು. ಪಾಪರಹಿತನಾದ, ಶುದ್ಧಾಂತಃಕರಣನಾದ ಜೀವಿಗೆ ಮಾತ್ರ ಭಗವಂತನ ದಾಸ್ಯ ದೊರೆಯುವುದು. ಆದರೆ ಜೀವಿ ತ್ರಿಗುಣಗಳ ಪ್ರಭಾವದಿಂದಲೂ, ಬಂಧಕಗಳಾದ ಪ್ರಾಪಂಚಿಕವಿಷಯಗಳಿಂದಲೂ, ನಿರಂತರ ತಪ್ಪುಗಳನ್ನು ಮಾಡುತ್ತಲೇ ಇರುತ್ತಾನೆ. ಕ್ಷಣ ಕ್ಷಣಕ್ಕೆ ಪಾಪರಾಶಿವೃದ್ಧಿಯಾಗುತ್ತಲೇ ಇರುತ್ತದೆ. ಇದನ್ನೇ ವಿಜಯಿಂದ್ರತೀರ್ಥರು ತಮ್ಮ ಪಾಪವಿಮೋಚನ ಸ್ತೋತ್ರದಲ್ಲಿ ಈ ಕೆಳಕಂಡಂತೆ ಹೇಳಿದ್ದಾರೆ.

**ಸುಕೃತಂ ತಿಲಮಾತ್ರಮಿಶ । ಕ್ರಿಯತೇ ನೈವ ಮಯ್ಯೆಕವತ್ಸರೇಪಿ**
**ಅಪಿತು ಕ್ರಿಯತೆ ಸದಾಘಪೂಗಃ ಪ್ರತಿಯಾಮಂ ಸಕಲೇಂದ್ರಿಯೈಃ ಮುಕುಂದಾ।**
**ರಮಯಾಪ್ಯಗಣಯ್ಯ ವಸ್ತುಜಾತಂ ದ್ವಿವಿಧಂ ಪ್ರಾಹುರಮಂದಬುದ್ಧಿಭಾಜಃ**

ತವ ಸದ್ಗುಣಜಾತಮೇಕಮನ್ಯತ್ ಮಮ ಧುರ್ವಾರದುರಂತ ಪಾಪಜಾತಂ । ಸ್ವಾಮೀ ನಾರಾಯಣ! ಇಡೀ ವರ್ಷದಲ್ಲಿ ಎಳ್ಳಿನಷ್ಟಾದರೂ ಪುಣ್ಯಮಾಡದ ನಾನು ಪ್ರತಿಯಾಮಕ್ಕೆ ಪಾಪಗಳ ರಾಶಿಯನ್ನೇ ಸಂಪಾದಿಸುತ್ತಿರುವೆನು. ಮುಂಕುಂದ!ರಮೆಗೆ ಗುಣಿಸಲು ಸಾಧ್ಯವಿಲ್ಲದ ವಸ್ತುಗಳು ಈ ವಿಶ್ವದಲ್ಲಿ ಎರಡು. ಒಂದು ನಿನ್ನ ಅನಂತಕಲ್ಯಾಣಗುಣಗಳು ಮತ್ತೊಂದು ನನ್ನ ಪಾಪಗಳು." ಜ್ಞಾನಿಗಳ ಮಾತಿನಂತೆ ಜೀವಿಗೆ ಪಾಪಗಳು ಸಂಘಟಿಸುತ್ತಾ ಹೋಗುತ್ತವೆ. ಈ ಪಾಪಗಳಿಂದ ಮುಕ್ತಿ, ಕೇವಲ ಭಗವಂತನ ನಾಮಸ್ಮರಣೆಯಿಂದ ಮಾತ್ರ ಸಾಧ್ಯ. ಭಗವಂತ ಅತ್ಯಂತಕರುಣಾಸಮುದ್ರನು. ಅವನು ತನ್ನನ್ನು ಸ್ಮರಿಸುವ ಭಕ್ತನ ಅಪರಾಧಗಳನ್ನು ಲೆಕ್ಕಿಸುವುದಿಲ್ಲ.

**"ಸ್ಮರಿಸುವವರಪರಾಧಗಳ ತಾ**
**ಸ್ಮರಿಸ ಸಕಲೇಷ್ಟಪ್ರದಾಯಕ**
**.......................................**
**ಪಾಪಕರ್ಮವ ಸಹಿಸುವಡೆ ಲಕ್ಷ್ಮೀ**
**ಪತಿಗೆ ಸಮರಾದ ದಿವಿಜರ –**
**ನೀ ಪಯೋಜಭವಾಂಡದೊಳಗಾವಲ್ಲಿ ನಾ ಕಾಣೆ"**

ಇದು ಶ್ರೀಜಗನ್ನಾಥದಾಸರು ಭಗವಂತನ ಕಾರುಣ್ಯವನ್ನು ವಿವರಿಸುತ್ತಾ ಆಡಿದ ಮಾತು. ಸ್ವತಃ ಭಗವಂತನೆ "ನಮೇ ಭಕ್ತಃ ಪ್ರಣಸ್ಯತಿ", ನನ್ನ ಭಕ್ತ ಎಷ್ಟು ಪಾಪಗಳನ್ನು ಮಾಡಿದರೂ ನಾಶಹೊಂದುವದಿಲ್ಲ ಅವನನ್ನು ನಾನು ಸದಾರಕ್ಷಿಸುತ್ತೇನೆ". ಎಂದು ಹೇಳಿ, ತನ್ನ ಭಕ್ತರಿಗೆ ಅಶ್ವಾಸನೆ ನೀಡಿರುವರು. ಭಗವಂತನ ಮಾತು ಎಲ್ಲ ಕಾಲದಲ್ಲೂ ಸತ್ಯವಾದದ್ದು, ದೃಢವಾದದ್ದು. ಇದನ್ನೇ ಪ್ರಸನ್ನವೆಂಕಟದಾಸರು "ನಿನ್ನ ನುಡಿಯೆ ಜಿತಲ್ಲೊ ಶ್ರೀನಿವಾಸ" ಎಂದು ಹೇಳಿ ಸಮರ್ಥಿಸಿರುವರು. ಈ ಎಲ್ಲಾ ಅರ್ಥಗಳು, ದೃಢ, ಸತ್ಯ ಎಂಬ ಅರ್ಥಗಳಲ್ಲಿರುವ ಜಿತ ಶಬ್ದದ ಪಾಠವನ್ನು ಅಂಗೀಕರಿಸಿದರೆ ಮಾತ್ರ ಸಾಧ್ಯ.

ಜೀತ ಎಂಬ ಪಾಠವೂ ಸಹ ಒಂದು ದೃಷ್ಟಿಯಲ್ಲಿ ಸುಂದರವೇ ಆಗಿದೆ. 'ಶ್ರೀನಿವಾಸನನ್ನನ್ನು ದುಡಿಸಿಕೊ, ಈ ನಿನ್ನ ಸೇವೆಗೆ ನಿನ್ನ ಅಂಗೀಕಾರವೇ ಬಹುದೊಡ್ಡ ಸಂಬಳ ನನ್ನ ಮಹಾ ಸಾಮ್ರಾಜ್ಯದಲ್ಲಿ ನಿನಗೆ ಸೇವೆ ಸಲ್ಲಿಸಲು ಅವಕಾಶ ಕೊಟ್ಟಿದ್ದೇನೆ ಎಂದು ನೀನು ಹೇಳಿದರೆ ಮಾತ್ರ ಸಾಕು. ಈ ಅರ್ಥಗಳು. ಸಂಬಳ ಎಂಬ ಅರ್ಥದಲ್ಲಿ ಪ್ರಯುಕ್ತವಾದ ಜೀತ, ಶಬ್ದದ ಪಾಠವನ್ನು ಅಂಗೀಕರಿಸಿದರೆ ಮಾತ್ರ ಸಾಧ್ಯ. ಆದರೆ ದಾಸರು ನಾಲ್ಕನೇಯ ಪಾದದಲ್ಲಿ "ನನ್ನ ನಡೆತಪ್ಪುಗಳನ್ನು ಮನ್ನಿಸಿ ರಕ್ಷಿಸು" ಎಂದು ಹೇಳಿರುವುದರಿಂದ, ಜಿತ ಎಂಬ ಪಾಠವೇ ಪ್ರಸನ್ನವೆಂಕಟದಾಸರು ಒಪ್ಪಿದ ಪಾಠವಾಗಿರಬಹುದು.

**"ಬಡಿಯೋ ಬೆನ್ನಲಿ ಶ್ರೀನಿವಾಸ ಎ–**
**ನ್ನೊಡಲ ಹೊಯ್ಯದಿರೋ ಶ್ರೀನಿವಾಸ ನಾ**
**ಬಡವ ಕಾಣೆಲೋ ಶ್ರೀನಿವಾಸ ನಿ –**
**ನ್ನೊಡಲ ಹೊಕ್ಕೆನೋ ಶ್ರೀನಿವಾಸ" ॥**



ಈ ಚರಣದಲ್ಲಿ ದಾಸಾರ್ಯರು "ಶ್ರೀನಿವಾಸ! ನಾ ಮಾಡಿದ ತಪ್ಪುಗಳಿಗೆ ಶಿಕ್ಷೆಯನ್ನು ಕೊಡು. (ಬಡಿಯೋ ಬೆನ್ನಲ್ಲಿ ಶ್ರೀನಿವಾಸ) ನನ್ನ ಹೊಟ್ಟೆಯ ಮೇಲೆ ಮಾತ್ರ ಹೊಡೆಯಬೇಡ. ಎಂದು ಪ್ರಾರ್ಥಿಸಿರುವರು. "ಬಡಿಯೋ ಬೆನ್ನಲಿ ಶ್ರೀನಿವಾಸ" ಎಂಬ ಪಾದವು ಮತ್ತೊಂದು ಅರ್ಥವನ್ನು ಸೂಚಿಸುವುದು. ಭಯಬಟ್ಟ ಮಗುವಿನ ಬೆನ್ನನ್ನು ತಟ್ಟಿ, ತಂದೆತಾಯಿಗಳು ಮಗುವಿನ ಭಯವನ್ನು ಓಡಿಸುವರು. ಇದರಂತೆ ಪಾಪಗಳನ್ನು ಮಾಡಿ, ಅವುಗಳಿಂದ ತತ್ತರಿಸಿದ ಜೀವಿಯನ್ನು ಭಗವಂತನು, 'ಭಯ ಪಡಬೇಡ' ಎಂದು ಬೆನ್ನ ಮೇಲೆ ಚಪ್ಪರಿಸುತ್ತಾ ಸಮಾಶ್ವಾಸಿಸುವನು. ಇದು ಭಗವಂತನ ನೈಜಗುಣ.

ದಾಸಾರ್ಯರು ಮೂರನೇ ಪಾದದಲ್ಲಿ "ನಾ ಬಡವ ಕಾಣೆಲೋ ಶ್ರೀನಿವಾಸ" ಎಂದು ಹೇಳಿ ತಮ್ಮನ್ನು ಬಡವನನ್ನಾಗಿ ನಿವೇದಿಸಿಕೊಂಡಿರುವರು. ಇದು ಸಾರ್ವಕಾಲಿಕ ಸತ್ಯ. ಅನಾದಿಯಿಂದ ಭಗವಂತನೊಟ್ಟಿಗೆ, ಅವನ ಅಧೀನದಲ್ಲಿ, ವಿಶ್ವದಲ್ಲೆಲ್ಲಾ ಅಸಂಖ್ಯಾಕವಾಗಿ ತುಂಬಿಕೊಂಡಿರುವ ಸೃಜ್ಯಾಸೃಜ್ಯಜೀವರೆಲ್ಲರೂ ಬಡವರೇ. ಅವರು ಸ್ವತಃ ಸಂಪಾದಿಸಿದ ಯಾವ ವಸ್ತೂವೂ ಈ ವಿಶ್ವದಲ್ಲಿಲ್ಲ. ಈವಿಶ್ವದಲ್ಲಿರುವ ಎಲ್ಲ ಪದಾರ್ಥಗಳು ಭಗವಂತನವೇ ಇದನ್ನೇ ಈಶಾವಾಸ್ಯೋಪನಿಷತ್ –

**"ಈಶಾವಾಸ್ಯ ಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜಿತಾಃ ಮಾಗೃಧಃ ಕಸ್ಯಸ್ವಿದ್ಧನಂ"**

ಎಂದು ಹೇಳಿ ಸ್ಪಷ್ಟಪಡಿಸಿರುವದು. ಪ್ರಾಯಃ ಎಲ್ಲ ಹರಿದಾಸರು ತಮ್ಮ ಕೀರ್ತನೆಗಳಲ್ಲಿ ತಮ್ಮನ್ನು ಬಡವರೆಂದೇ ಹೇಳಿಕೊಂಡಿರುವರು. ಸ್ವರೂಪ ದೇಹ ಮಾತ್ರ ಜೀವಿಯ ಸಂಪತ್ತು. ಅವನು ಅನಾದಿಕಾಲದಿಂದ ಪಡೆದುಕೊಂಡುಬಂದ ಸಂಪತ್ತು. ಉಳಿದ ಎಲ್ಲಾ ವಸ್ತುಗಳು ಭಗವಂತನಿಗೆ ಸಂಬಂಧಿಸಿದವುಗಳು. ಭಗವಂತನು ಮಾತ್ರ ಯಾವ ವಸ್ತುವನ್ನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವುದಿಲ್ಲ. ಎಲ್ಲವನ್ನು ಜೀವರಿಗಾಗಿ ಸೃಷ್ಟಿಸಿರುವನು. ಇದು ನಿಜವಾದ ಪ್ರಮೇಯ. ಈ ಪ್ರಮೇಯದ ಸೂಚನೆಗಾಗಿಯೇ ದಾಸಾರ್ಯರು ತಮ್ಮನ್ನು ಬಡವನೆಂದು ಹೇಳಿಕೊಳ್ಳುತ್ತಾ "ನಾ ಬಡವ ಕಾಣೆಲೋ ಶ್ರೀನಿವಾಸ" ಎಂದು ಹೇಳಿರುವರು.

ಬಡವರಾದ ಜೀವಿಗಳು ಸಿರಿವಂತನಾದ ಶ್ರೀನಿವಾಸನನ್ನೇ ಆಶ್ರಯಿಸಬೇಕು. ಆಗ ಮಾತ್ರ ಸುಖಪ್ರಾಪ್ತಿ. ಇದನ್ನರಿತ ಪ್ರಸನ್ನವೆಂಕಟದಾಸರು "ನಿನ್ನೊಡಲ ಹೊಕ್ಕೇನೋ ಶ್ರೀನಿವಾಸ" ಎಂದು ಹೇಳಿರುವರು. ಶರಣೆನ್ನುವುದು ಜೀವಿಯ ಮುಖ್ಯ ಕರ್ತವ್ಯ. ಶರಣಾಗತ ರಕ್ಷಣೆಯನ್ನೇ ತನ್ನ ಮುಖ್ಯಕರ್ತವ್ಯವನ್ನಾಗಿ ಇಟ್ಟುಕೊಂಡುವನು ಶ್ರೀನಿವಾಸ.

**"ಪಂಜು ಹಿಡಿವೆನೋ ಶ್ರೀನಿವಾಸ । ನಿ–**
**ನ್ನೆಂಜಲ ಬಳದುಂಬೆ ಶ್ರೀನಿವಾಸ ನಾ**
**ಸಂಜೆ ಉದಯಕೆ ಶ್ರೀನಿವಾಸ ಕಾ**
**ಳಂಜಿಯ ಪಿಡಿವೇ ಶ್ರೀನಿವಾಸ ॥**
**ಸತ್ತಿಗೆ ಚಾಮರ ಶ್ರೀನಿವಾಸ ನಾ –**
**ನ್ನೊತ್ತು ನಲಿವೆನೋ ಶ್ರೀನಿವಾಸ ನಿನ್ನ**

**ರತ್ನದ ಹಾವಿಗೆ ಶ್ರೀನಿವಾಸ ನಾ –**
**ನೆತ್ತಿ ಕುಣಿವೆನೋ ಶ್ರೀನಿವಾಸ**

ಪಲ್ಲವಿ ಹಾಗೂ ಮೊದಲನೆಯ ಚರಣದಲ್ಲಿ ದಾಸಾರ್ಯರು, "ಶ್ರೀನಿವಾಸ! ಸಂಪದ್ಭರಿತಗಳಾದ ನಿನ್ನ ಪಾದಗಳನ್ನು ಬಿಡುವುದಿಲ್ಲ. ನನ್ನ ದೋಷಗಳನ್ನು ಎಣಿಸದೆ, ನನ್ನಿಂದ ಸೇವೆಯನ್ನು ಸ್ವೀಕರಿಸು "ನ ಮೇ ಭಕ್ತಃ ಪ್ರಣಶ್ಯತಿ" ಎಂಬ ನಿನ್ನ ನಿಶ್ಚಯಾತ್ಮಕವಾದ ಮಾತನ್ನು ನಂಬಿ ಜೀವಿಸಿದ್ದೇನೆ. ನನ್ನ ತಪ್ಪುಗಳನ್ನು ಕ್ಷಮಿಸುತ್ತಾ ಧೈರ್ಯ ತುಂಬಲು ಬೆನ್ನನ್ನು ಚಪ್ಪರಿಸು. ನಾ ಮಾಡಿದ ತಪ್ಪುಗಳಿಗೆ ಶಿಕ್ಷೆಯನ್ನು ವಿಧಿಸು. ನಿನ್ನನ್ನೇ ಶರಣು ಹೊಕ್ಕಿದ್ದೇನೆ. ನನ್ನದೆನ್ನುವುದು, ನಾನು ಸ್ವತಃ ಸಂಪಾದಿಸಿದ್ದು ಯಾವುದೂ ಇಲ್ಲ. ನಾನು ಅನಾದಿಯಿಂದ ಬಡವನೆ ಜ್ಞಾನ–ಭಕ್ತಿ; ವೈರಾಗ್ಯಗಳಿಲ್ಲದ ಕಡುಬಡವನು" ಎಂದು ಹೇಳಿ, ಈ ಎರಡುಮೂರನೇಚರಣಗಳಲ್ಲಿ ತಾವು ಸ್ವಾಮಿಶ್ರೀನಿವಾಸನಿಗೆ ಸಲ್ಲಿಸಲಪೇಕ್ಷಿಸುವ ಸೇವೆಗಳನ್ನು ವಿವರಿಸಿರುವರು.

ಶ್ರೀನಿವಾಸ! ಕೋಟಿಸೂರ್ಯಪ್ರಭಾಭಾಸಿತನಾದ ನಿನ್ನ ಮುಂದೆ ನಾನು ದೀಪವನ್ನು ಹಿಡಿದು ನಿಲ್ಲುತ್ತೇನೆ. ನಿನ್ನ ಪ್ರಸಾದವನ್ನು ಪ್ರೀತಿಯಿಂದ ಸ್ವೀಕರಿಸುತ್ತೇನೆ. ನಿನ್ನ ಪಕ್ಕದಲ್ಲಿದ್ದು, ನಿನಗೆ ಅನುಕೂಲವಾಗುವಂತೆ, ನಿನ್ನ ತಾಂಬೂಲರಸದ ಉಗುಳುಪಾತ್ರೆಯನ್ನು (ಪೀಕದಾನಿ) ಹಿಡಿದು ಸದಾನಿಲ್ಲುತ್ತೇನೆ. ನಿನಗೆ ಶ್ವೇತಛತ್ರವನ್ನು ಹಿಡಿದು, ಚಾಮರಬೀಸುತ್ತಾ ಮನದಲ್ಲಿ ನಲಿಯುತ್ತೇನೆ. ನಿನ್ನ ರತ್ನದ ಹಾವುಗೆಗಳನ್ನು ಸದಾ ತಲೆಯಲ್ಲಿ ಹೊತ್ತು, ಆನಂದಪರವಶನಾಗಿ ನರ್ತಿಸುತ್ತಾ, ನಿನ್ನ ಹಿಂದೆ ಬರುತ್ತೇನೆ. ಎಂದು ಹೇಳಿಕೊಂಡಿರುವರು.

ದಾಸಾರ್ಯರು ಈ ಎರಡು ಚರಣಗಳಲ್ಲಿ ಬಳಸಿದ ಪಂಜು, ಪ್ರಸಾದ, ಕಾಳಂಜಿ, ಸುತ್ತಿಗೆ, ಚಾಮರ, ರತ್ನದಹಾವುಗೆ ಶಬ್ದಗಳು ಬಹಳ ಅರ್ಥಗರ್ಭಿತವಾದವುಗಳು. ಪಂಜು ಎಂದರೆ ದೀವಿಗೆ; ದೀಪ. ದೀಪ ಜ್ಞಾನಕ್ಕೆ ಪ್ರತಿರೂಪ. ಭಗವಂತನನ್ನು ಜ್ಞಾನದ ಬೆಳಕಿನಲ್ಲಿ ಕಾಣಬೇಕು. ಜ್ಞಾನವಿಲ್ಲದ ವ್ಯಕ್ತಿಯಲ್ಲಿ ವೈರಾಗ್ಯ ಭಕ್ತಿಗಳು ಉದಯಿಸಲಾರವು. ಭಗವದ್ದರ್ಶನಕ್ಕೆ ಜ್ಞಾನಸಹಿತವಾದ ಭಕ್ತಿಯೇ ಮುಖ್ಯ ಕಾರಣ. ಈ ಅರ್ಥದಲ್ಲೆ ದಾಸಾರ್ಯರು "ಶ್ರೀನಿವಾಸ! ಜ್ಞಾನದ ಪಂಜನ್ನು ಹಿಡಿಯುತ್ತೇನೆ; ನಿನ್ನ ವಿಷಯಕಗಳಾದ ಶ್ರುತಿ–ಸ್ಮೃತಿ ಪುರಾಣ, ವೇದಾಂತ ಗ್ರಂಥಗಳಿಂದ ತಿಳಿದುಬರುವ, ಶುದ್ಧಜ್ಞಾನಮಾರ್ಗದಲ್ಲಿ ನಡೆದು ಧನ್ಯನಾಗುತ್ತೇನೆ". ನಿಜವಾದ ಜ್ಞಾನಿಗೆ ಭಗವತ್ಸಂಕಲ್ಪಕ್ಕನುಗುಣವಾಗಿ ಜೀವನದಲ್ಲಿ ದೊರೆಯುವ ಸುಖದುಃಖಗಳು ಭಗವತ್ಪ್ರಸಾದಗಳಾಗಿಯೇ ತಿಳಿದುಬರುವವು. ಅವನು ಸುಖದುಃಖಗಳನ್ನು ಭಗವಂತನ ಪ್ರಸಾದರೂಪದಲ್ಲಿ ಅನುಭವಿಸುತ್ತಾನೆ. ದಾಸರು ಬಳಸಿದ ಎಂಜಲು ಶಬ್ದಕ್ಕೆ ಪ್ರಸಾದ ಎಂದು ಅರ್ಥ. ಭಗವಂತನಿಂದ ದೊರೆಯುವ ರೋಗ – ಭೋಗ – ಐಶ್ವರ್ಯ – ದಾರಿದ್ರ್ಯ–ಸುಖ–ದುಃಖಗಳೆಲ್ಲವೂ ನಿಜವಾದ ಅರ್ಥದಲ್ಲಿ ಅವನ ಪ್ರಸಾದಗಳೇ. ಇದನ್ನು ಚೆನ್ನಾಗಿ ಬಲ್ಲ ಹರಿದಾಸರೆಲ್ಲರೂ ಆನಂದದಿಂದ.

**"ಸುಖವಾಗಲಿ ಬಹು ದುಃಖವಾಗಲಿ ಸಖ ನೀನಾಗಿರೊ ಪಾಂಡುರಂಗ"**
**"ನಿನ್ನ ಚಿತ್ತಕೆ ಬಂದುದೆನ್ನಚಿತ್ತಕ್ಕೆ ಬರಲಿ"**



**"ಮಾನಾಭಿಮಾನವು ನಿನ್ನದೊ ಎನಗೇನೋ"**
**"ಇಟ್ಹಾಂಗೆ ಇರುವೆನೋ ಹರಿಯೇ ಎನ್ನ ಧ್ವರಿಯೇ"**

ಎಂದು ಹೇಳಿರುವರು. ಕನಕದಾಸರು ಸಹ

**ತನು ನಿನ್ನದು ಜೀವನ ನಿನ್ನದು**
**ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ"**

ಎಂದು ಹೇಳಿ, ಭಗವಂತನು ಜೀವಿಯ ಉದ್ಧಾರಕ್ಕಾಗಿ, ಅವನ ಸಾಧನೆಗಾಗಿ, ಅವನ ಪ್ರಾರಂಭ್ಧಪ್ರಕ್ಷಾಲನೆಗಾಗಿ, ಸುಖದುಃಖಾದಿಗಳನ್ನು ಪ್ರಸಾದರೂಪದಲ್ಲಿ ಕರುಣಿಸುತ್ತಾನೆ, ಎಂಬ ಪ್ರಮೇಯವನ್ನು ಸ್ಪಷ್ಟಪಡಿಸಿರುವರು.

ಹರಿಸರ್ವೋತ್ತಮ; ವಾಯುಜೀವೋತ್ತಮ, ಪಂಚಭೇದಸತ್ಯ, ಚೇತನಾಚೇತನಾತ್ಮಕವಾದ ಜಗತ್ತೆಲ್ಲಾ ಶ್ರೀಹರಿಗೆ ಅಧೀನವಾದದ್ದು, ಜಗತ್ತಿಗೆ ಸ್ವಾತಂತ್ರ್ಯವೇ ಇಲ್ಲ, ಶ್ರೀಹರಿಯೇ ಪ್ರೇರಕಪ್ರೇರ್ಯ, ವ್ಯಾಪಕ–ವ್ಯಾಪ್ತ, ಸೇವ್ಯ–ಸೇವಕ ಎಂಬ ದಿವ್ಯಜ್ಞಾನದಿಂದ ಕೂಡಿದ ಭಕ್ತಿಯನ್ನು ಅವಿಚ್ಛಿನ್ನವಾಗಿ ಮಾಡುವ ಭಕ್ತ ಬಂದದ್ದೆಲ್ಲವನ್ನು ಗೋವಿಂದನ ಪ್ರಸಾದವೆಂದನುಭವಿಸುತ್ತಾ ಶ್ರೀಹರಿಗೆ ದಾಸಾನುದಾಸನಾಗುತ್ತಾನೆ.

ಅವನು "ದಾಸೋಹಂ ತವ ದಾಸೋಹಂ ವಾಸುದೇವ ವಿಗತಾಘಸಂಘ ತವ ದಾಸ್ಯೋಹಂ ತವ ದಾಸೋಹಂ" ಎಂದು ಹಾಡುತ್ತಾ, ಕುಣಿಯುತ್ತಾ, ಆನಂದಿಸುತ್ತಾನೆ. ಇಂಥಾ ಭಕ್ತನಿಗೆ, ಭಗವಂತನಿಗೆ ಸಂಬಂಧಿಸಿದ ಎಲ್ಲ ಸೇವೆಗಳು ಅಪೂರ್ವವಾದವುಗಳೇ; ಎಲ್ಲ ಸೇವೆಗಳು ತಾರಕಗಳೇ; ಭಗವತ್ಸೇವೆಗಳಲ್ಲಿ ನೀಚೋಚ್ಚತನಗಳಿಲ್ಲ. ಇದನ್ನು ಬಲ್ಲ ಧನ್ಯಜೀವಿಗಳು ಪ್ರಸನ್ನವೆಂಕಟದಾಸರು. ಅದಕ್ಕಾಗಿಯೇ ದಾಸರು "ಶ್ರೀನಿವಾಸ ನಾ ಸಂಜೆ ಉದಯಕ್ಕೆ ಕಾಳಂಜಿಯ ಪಿಡಿವೆ" ಎಂದು ಹಾಡಿದರು.

ಅಹಂಕಾರರಹಿತನಾಗಿ, ವಿನಯದ ಸಾಕಾರಮೂರ್ತಿಯಾದ ದಾಸಜೀವಿ, ಹರಿದಾಸ್ಯದ ಸವಿಯನ್ನನುಭವಿಸುತ್ತಾ, ಹರಿಸೇವೆಯಲ್ಲೇ ಜೀವನವನ್ನು ಕಳೆಯುವನು. ಅವನ ನಡೆ ನುಡಿಗಳೆಲ್ಲವೂ ಭಗವತ್ಪರಗಳಾಗಿರುತ್ತವೆ. ಅವನ ಮನಸ್ಸು, ಇಂದ್ರಿಯಗಳು. ಬುದ್ಧಿ ಎಲ್ಲವು ಶ್ರೀಹರಿಸೇವೆಗಾಗಿ ಹಾತೊರೆಯುತ್ತಾ, ಹರಿಸೇವೆಯಲ್ಲೇ ಆಸಕ್ತವಾಗಿರುತ್ತವೆ. ಇಂಥಾದಾಸನು ತನ್ನ ಮನಸ್ಸನ್ನು ಶ್ವೇತಛತ್ರದಂತೆ ವಿಶಾಲಗೊಳಿಸಿ ಸ್ವಾಮಿಸೇವೆಗಾಗಿಯೇ ಮೀಸಲು ಮಾಡುತ್ತಾನೆ. ತನ್ನ ಇಂದ್ರಿಯಗಳನ್ನು ಚಾಮರಗಳನ್ನಾಗಿಸುತ್ತಾನೆ. ಬುದ್ಧಿಯಲ್ಲಿ ಭಗವಂತನ ಪಾದಗಳನ್ನಿಟ್ಟು, ಸದಾ ಮಾನಸಿಕವಾಗಿ ಆನಂದಿಸುತ್ತಾ ನರ್ತಿಸುತ್ತಿರುತ್ತಾನೆ. ಪ್ರಸನ್ನವೇಂಕಟದಾಸರು ಈ ಮಟ್ಟದ ಹರಿದಾಸರು. ತಮ್ಮ ಅಂತರಂಗದ ಈ ಭಾವಗಳನ್ನು ಧ್ವನ್ಯರ್ಥದಲ್ಲಿ ಸೂಚಿಸುತ್ತಾ–

**ಸತ್ತಿಗೆ ಚಾಮರ ಶ್ರೀನಿವಾಸ ನಾ –**
**ನೆತ್ತಿ ನಲಿವೆನೋ ಶ್ರೀನಿವಾಸ ನಿನ್ನ**
**ರತ್ನದ ಹಾವಿಗೆ ಶ್ರೀನಿವಾಸ ನಾ –**
**ನ್ಹೊತ್ತು ಕುಣಿವೆನೋ ಶ್ರೀನಿವಾಸ** ಎಂದು ಹಾಡಿರುವರು.

ಇದೀಗ ಅಚ್ಚಾದ ಪ್ರಸನ್ನವೆಂಕಟದಾಸರ ಕೀರ್ತನೆಗಳ ಪುಸ್ತಕಗಳಲ್ಲಿ ಮೂರನೇ ಚರಣದ ಪಾಠಕ್ರಮವು ಈ ಕೆಳಕಂಡಂತೆ ಇದೆ.

**ಸತ್ತಿಗೆ ಚಾಮರ ಶ್ರೀನಿವಾಸ ನಾ –**
**ನೆತ್ತಿ ಕುಣಿವೆನೋ ಶ್ರೀನಿವಾಸ ನಿನ್ನ**
**ರತ್ನದ ಹಾವಿಗೆ ಶ್ರೀನಿವಾಸ ನಾ –**
**ನ್ನೊತ್ತು ನಲಿವೆನೋ ಶ್ರೀನಿವಾಸ ॥**

ಭಗವಂತನಿಗೆ ಸೇವೆ ಸಲ್ಲಿಸುವುದಕ್ಕಾಗಿ ಛತ್ರಿಕೆಚಾಮರಗಳನ್ನು ಹಿಡಿದು ಕುಣಿದಲ್ಲಿ ಅವುಗಳಿಂದ ಉಂಟಾಗಬೇಕಾದ ಪ್ರಯೋಜನ ಪೂರ್ಣರೂಪದಲ್ಲಿ ದೊರೆಯುವುದಿಲ್ಲ. ಇವುಗಳ ಸೇವೆ ಪೂರ್ಣಪ್ರಮಾಣದಲ್ಲಿ ಭಗವಂತನಿಗೆ ಸಮರ್ಪಿತವಾಗಬೇಕಾದಲ್ಲಿ, ಅವುಗಳನ್ನು ಹಿಡಿದಾಗ ಮಾನಸಿಕವಾಗಿ ಕುಣಿಯುತ್ತಾ ದೈಹಿಕವಾಗಿ ನಲಿಯಬೇಕು. ಕುಣಿಯುವ ನಲಿಯುವ ಶಬ್ದಗಳ ಮಧ್ಯದಲ್ಲಿ ಅರ್ಥದಲ್ಲಿ ಭೇದವಿದು. ಕುಣಿಯುವುದು ತಾಂಡವಕ್ಕೆ ಪ್ರತಿರೂಪ, ನಲಿಯುವುದು ಲಾಸ್ಯಕ್ಕೆ ಪ್ರತಿರೂಪ. ಕುಣಿತದಲ್ಲಿ ಆರ್ಭಟವಿರುತ್ತದೆ. ಲಾಸ್ಯದಲ್ಲಿ ಮಾರ್ದವತೆ ಇರುತ್ತದೆ. ಇದರಿಂದ ದಾಸರು ಪ್ರಾಯಃ ಎರಡನೇ ಪಾದದಲ್ಲಿ 'ನಲಿಯುವೆನೋ!' ನಾಲ್ಕನೇಪಾದದಲ್ಲಿ ಕುಣಿಯುವೆನೋ । ಎಂಬ ಶಬ್ದಗಳನ್ನು ಹಾಕಿರಬಹುದೇ ಎನಿಸುತ್ತದೆ. ಇದು ಕೇವಲ ಊಹೆ ಮಾತ್ರ.

**ಹೇಳಿದಂತಾಲಿಹೆ ಶ್ರೀನಿವಾಸ ನಿ –**
**ನ್ನಾಳಿಗಾಳಾಗಿಹೆ ಶ್ರೀನಿವಾಸ ಅವ –**
**ರೂಳಿಗವ ಮಾಳ್ಪೆ ಶ್ರೀನಿವಾಸ ಎನ್ನ**
**ಪಾಲಿಸೊ ಬಿಡದೆ ಶ್ರೀನಿವಾಸ॥"**

ಇದು ಕೀರ್ತನೆಯ ನಾಲ್ಕನೆಯ ಚರಣ. ಸುಂದರ ಚರಣ. ಬಹ್ವರ್ಥಗರ್ಭಿತ ಚರಣ.

"ಶ್ರುತೀಸ್ಸ್ಮೃತೀ ಹರೇರಾಜ್ಞೆ" ಎಂಬ ವಾಕ್ಯದಂತೆ ಶ್ರುತಿ ಸ್ಮೃತಿ ಪುರಾಣಗಳಲ್ಲಿ ಹೇಳಿದಂತೆ, ಭಗವದಾರಾದನಾರೂಪಗಳಾದ ಸತ್ಕರ್ಮಗಳನ್ನಾಚರಿಸಬೇಕು. ತಂದೆತಾಯಿಗಳನ್ನು ಭಗವಂತನ ಪ್ರತಿಮೆಗಳನ್ನಾಗಿ ಭಾವಿಸಿ, ಭಕ್ತಿಯಿಂದ ಅವರಿಗೆ ಸೇವೆ ಸಲ್ಲಿಸಬೇಕು. ಸದಾ ಧರ್ಮಮಾರ್ಗದಲ್ಲಿ ನಡೆಯುತ್ತಾ, ಶಮದಮಾದಿಗುಣಗಳಿಂದ ಕೂಡಿ, ಸತ್ಯಶೌಚಾದಿಗಳನ್ನು ಮೈಗೂಡಿಸಿಕೊಂಡು ಬಾಳಬೇಕು.

"ಶುನಿ ಚೈವ ಸ್ವಪಾಕೇ ಚ ಪಂಡಿತಾಃ ಸಮದರ್ಶಿನಃ" ಎಂಬ ಗೀತಾಚಾರ್ಯನ ವಚನದಂತೆ, ಸರ್ವತ್ರಭಗವಂತನನ್ನು ನೋಡುತ್ತಾ, ಯಾರನ್ನೂ ದ್ವೇಷಿಸದೆ, ಎಲ್ಲರನ್ನೂ ಪ್ರೀತಿಸುತ್ತಾ, ಈರ್ಷ್ಯ–ದ್ವೇಷ– ಅಸೂಯಾದಿದುರ್ಗುಣಗಳಿಂದ ದೂರನಾಗಿ ಜೀವಿಸಬೇಕು.

"ಬಂದಷ್ಟರಿಂದಲ್ಲೆ ಬಾಳಿಕೋ, ಗೋವಿಂದ ನಿನ್ನವನೆಂದು ಹೇಳಿಕೋ" ಎಂಬಂತೆ, ನಾಳಿಗೆ ಹ್ಯಾಂಗೆಂದು ಚಿಂತಿಸದೆ, ಭಗವಂತಕೊಟ್ಟದ್ದರಿಂದ ತೃಪ್ತನಾಗಿ, ಮಮ ಸ್ವಾಮಿ ಶ್ರೀಹರಿ ಎಂದು ಹೇಳಿಕೊಳ್ಳುತ್ತಾ, ಸಜ್ಜನರ ಸಂಗದಲ್ಲಿ ನಡೆಯಬೇಕು. ಇವು ಎಲ್ಲಾ



ಶ್ರೀಹರಿಯ ಆಜ್ಞೆಗಳೆ. ಈ ಎಲ್ಲವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಪ್ರಸನ್ನವೆಂಕಟದಾಸರು "ಶ್ರೀನಿವಾಸ! ಹೇಳಿದಂತಾಲಿಹೆ" ಎಂದು ಹೇಳಿಕೊಂಡಿರುವರು. ನಮಗೂ ಹಾಗೆ ಜೀವಿಸಲು ಸಂದೇಶ ನೀಡುತ್ತಿರುವರು.

ತನ್ನ ಭಕ್ತರಲ್ಲಿ ಭಕ್ತಿ ಮಾಡುವ ವ್ಯಕ್ತಿಯಲ್ಲಿ ಭಗವಂತನಿಗೆ ಅತ್ಯಂತ ಪ್ರೀತಿ. ಇದನ್ನು ಚೆನ್ನಾಗಿ ಬಲ್ಲ ದಾಸಾರ್ಯರು.

**ನಿನ್ನಾಳಿಗಾಳಾಗಿಹೆ ಶ್ರೀನಿವಾಸ!ಅವ –**
**ರೂಳಿಗವಾ ಮಾಳ್ಪೆ ಶ್ರೀನಿವಾಸ!**

ಎಂದು ಹೇಳಿಕೊಂಡಿರುವರು. ಈಚರಣಕ್ಕೆ ದಾಸಾರ್ಯರು ಕಂಡ ಮತ್ತೊಂದು ಅರ್ಥವೂ ಉಂಟು.

ಭಗವಂತನ ದಾಸರಲ್ಲಿ ಅತ್ಯಂತ ಶ್ರೇಷ್ಠರಾದ ದಾಸರು ಇಬ್ಬರು. ಅವರೇ ಬ್ರಹ್ಮ ವಾಯುಗಳು. ಬ್ರಹ್ಮದೇವರಿಗೆ ಅವತಾರಗಳಿಲ್ಲ. ವಾಯುದೇವರು ಶ್ರೀಹರಿಯ ಆಜ್ಞೆಯನ್ನು ಶಿರಸಾಧರಿಸಿ, ಸ್ವಾತ್ವಿಕ ಜನರ ಉದ್ಧಾರಕ್ಕಾಗಿ, ದುಷ್ಟಜನರ ನಿಗ್ರಹಕ್ಕಾಗಿ ಹನುಮ ಭೀಮ ಮಧ್ವರಾಗಿ ಧರೆಗಿಳಿದು ಬಂದರು. ಹನುಮಭೀಮಾವತಾರಗಳು ಬಲಾವತಾರಗಳು. ದುಷ್ಟರ ದಮನಕ್ಕಾಗಿ ಬಂದ ಅವತಾರಗಳು. ಶ್ರೀಮದಾನಂದತೀರ್ಥಭಗವತ್ಪಾದರ ಅವತಾರ ಜ್ಞಾನಾವತಾರ. ಶ್ರುತಿ–ಸ್ಮೃತಿ ಪುರಾಣಗಳಿಗೆ, ವ್ಯಾಸರಿಗೆ ಸಮ್ಮತವಾದ ಅರ್ಥವನ್ನು ತಿಳಿಸಿ, ಸಜ್ಜನರನ್ನು ಹರಿಯ ಲೋಕಕ್ಕೆ ಸೇರಿಸಲು ಬಂದ ಅವತಾರ. ಹರಿಯೇ ಸರ್ವೋತ್ತಮ; ಜಗತ್ತು ಸತ್ಯ; ಜೀವರು ಪರಸ್ಪರ ಭಿನ್ನರು; ಎಲ್ಲರೂ ಹರಿಯ ಆಜ್ಞೆಗೆ ಬದ್ಧರಾಗಿ, ಅವನ ವಶವರ್ತಿಗಳಾಗಿ ಜೀವಿಸುವವರು; ಸಾತ್ವಿಕ ರಾಜಸ – ತಾಮಸ ಭೇದದಿಂದ ಭಿನ್ನರಾದ ಜೀವರೆಲ್ಲರೂ ತರತಮಭಾವವುಳ್ಳವರು; ಸ್ವಸ್ವರೂಪಾನಂದಾವಿರ್ಭಾವವೇ ಮುಕ್ತಿ; ಈಮುಕ್ತಿಯ ಪ್ರಾಪ್ತಿಗೆ ಭಕ್ತಿಯೇ ಪ್ರಧಾನ ಕಾರಣ, ಎಂಬ ಈ ನವತತ್ತ್ವ ರತ್ನಗಳನ್ನು ತಮ್ಮ ಗ್ರಂಥಗಳ ದ್ವಾರಾ ಜಗತ್ತಿಗೆ ನೀಡಿದ ಜಗದ್ಗುರುಗಳು ಆನಂದತೀರ್ಥರು. ಈ ನಿಜತತ್ತ್ವಗಳ ಜ್ಞಾನದಿಂದಲೇ ಶ್ರೀಹರಿಯ ಅನುಗ್ರಹ ಪ್ರಾಪ್ತಿ. ಸಂಸಾರ ಬಂಧನದಿಂದ ಬಿಡುಗಡೆ.

ಈ ಎಲ್ಲವನ್ನೂ ತಿಳಿದು, ಅನುಭವದಲ್ಲಿಟ್ಟುಕೊಂಡ ಪ್ರಸನ್ನವೆಂಕಟದಾಸರು, ತಮ್ಮ ಜೀವಿತೇಶ್ವರನಾದ ಶ್ರೀನಿವಾಸನಲ್ಲಿ ವಿಜ್ಞಾಪಿಸಿಕೊಳ್ಳುತ್ತಾರೆ" – ಶ್ರೀನಿವಾಸ! ನಿನಗೆ ಮುಖ್ಯ ಆಳೆನಿಸಿದ ಆಚಾರ್ಯಮಧ್ವರಿಗೆ ನಾನು ಆಳಾಗಿರುವೆನು. ಅವರ ಸೇವಕನಾಗಿರುವೆನು. ಅವರು ತೋರಿ ಹೇಳಿದ ಮಾರ್ಗದಲ್ಲಿ ನಡೆಯುತ್ತಿರುವೆನು. ಅವರ, ಅವರ ಗ್ರಂಥಗಳ ಸೇವೆಯನ್ನು ಕಾಯೇನ ವಾಚ. ಮನಸಾ ಸದಾ ಮಾಡುತ್ತಿರುವೆನು. ನನ್ನನ್ನು ಉದ್ಧರಿಸು. ಇದೇ ಈಚರಣದ ನಿಜವಾದ ಅರ್ಥ.

**ಹೇಳೀದಂತಾಲಿಹೆ ಶ್ರೀನಿವಾಸ । ನಿ –**
**ನ್ನಾಳಿಗಾಳಾಗಿಹೆ ಶ್ರೀನಿವಾಸ । ಅವ –**
**ರೂಳಿಗವ ಮಾಳ್ಪೆ ಶ್ರೀನಿವಾಸ । ಎನ್ನ**
**ಪಾಲಿಸೊ ಬಿಡದೇ ಶ್ರೀನಿವಾಸ!**

ಈ ಚರಣದ ಮೊದಲನೆಯ ಪಾದವು ಈಗಿನ ಕೆಲಪುಸ್ತಕಗಳಲ್ಲಿ **"ಹೇಳಿದಂತಾಲಿಪೆ ಶ್ರೀನಿವಾಸ!"** ಎಂಬ ಪಾಠಾಂತರದಿಂದ ಮುದ್ರಿತವಾಗಿದೆ. ಈ 'ಆಲಿಪೆ! ಎಂಬ ಶಬ್ದವು ಭವಿಷ್ಯದರ್ಥ ವಾಚಕ. (ಕೇಳುತ್ತೇನೆ) ಶ್ರೀನಿವಾಸ ನೀನು ಹೇಳಿದಂತೆ ನಾನು ಕೇಳುತ್ತೇನೆ. ಈ ಪಾಠದಿಂದ ಪ್ರಕೃತ ನಾನು ನೀನು ಹೇಳಿದಂತೆ ಕೇಳುತ್ತಿಲ್ಲ. ಮುಂದೆ ನೀ ಹೇಳಿದಂತೆ ಕೇಳುತ್ತೇನೆ ಎಂಬ ಭಾವವು ವ್ಯಕ್ತವಾಗುತ್ತದೆ. ಹೀಗಲ್ಲದೆ "ಹೇಳಿದಂತಾಲಿಹೆ" ಎಂಬ ಪಾಠದಿಂದ "ಶ್ರೀನಿವಾಸ! ನಿನ್ನ ಆಜ್ಞೆಗೆ ಬದ್ಧನಾಗಿ ಈಗ ಇದ್ದೇನೆ" ಎಂಬ ಅರ್ಥವು ವ್ಯಕ್ತವಾಗಿ, ಸಾಧನದ ನಿಷ್ಠೆ. ಆಸಕ್ತಿ, ಧೃಢತೆಗಳು ಪ್ರಕಟವಾಗುವವು.

ಮುಂದಿನ ಐದು–ಆರನೆಯ, ಚರಣಗಳಲ್ಲಿ ದಾಸಾರ್ಯರು ಭಗವನ್ನಾಮ ಮಾಹಾತ್ಮೆಯನ್ನೂ, ಅದರ ಅಪೂರ್ವತೆಯನ್ನೂ, ಹೇಳಿ ಆಭಗವನ್ನಾಮದ ಶ್ರವಣ ಕೀರ್ತನೆ ಸ್ಮರಣೆಗಳಿಂದ ದೂರಾದ ಮಾನವನ ಹೀನತೆಯನ್ನು, ಈ ಕೃತಘ್ನತೆಯಿಂದ ಜೀವಿ ಅನುಭವಿಸಬೇಕಾದ ಕಷ್ಟಗಳಸ ಪರಂಪರೆಯನ್ನು ದಾಸಾರ್ಯರ ಸ್ಪಷ್ಟಪಡಿಸಿರುವರು.

**ನಿನ್ನ ನಾಮ ಹೋಳಿಗೆ, ಶ್ರೀನಿವಾಸ ಕಳ್ಳ ।**
**ಕುನ್ನಿ ನಾನಾಗಿಹೆ ಶ್ರೀನಿವಾಸ ಕಟ್ಟಿ**
**ನಿನ್ನವರೊದ್ದರೆ ಶ್ರೀನಿವಾಸ ನನ –**
**ಗಿನ್ನು ಲಜ್ಜೇತಕೆ ಶ್ರೀನಿವಾಸ ।**

**ಬೀಸಿ ಕೊಲ್ಲಲವರೆ ಶ್ರೀನಿವಾಸ ಮುದ್ರೆ –**
**ಕಾಸಿ ಚುಚ್ಚಲವರೆ ಶ್ರೀನಿವಾಸ ಮಿಕ್ಕ**
**ಘಾಸಿಗಂಜೆನಯ್ಯ ಶ್ರೀನಿವಾಸ ಎಂಜ –**
**ಲೀಸೆಯ ಬಂಟ ನಾ ಶ್ರೀನಿವಾಸ ॥**

ಭಗವಂತನ ನಾಮ ಹೋಳಿಗೆ; ಹಳಸದ ಹೋಳಿಗೆ, ತಿಂದಷ್ಟು ತಿನ್ನಬೇಕೆಂದೆನಿಸುವ ಹೋಳಿಗೆ; ಅರುಚಿಯನ್ನುಂಟುಮಾಡದ ಹೋಳಿಗೆ. ಒಮ್ಮೆ ಸವಿದರೆ ಸಾಕು ಜೀವನದ ಉದ್ದಕ್ಕೂ ಆನಂದವನ್ನುಂಟುಮಾಡುವ ಹೋಳಿಗೆ. ಬಕ್ಷ್ಯಗಳಲ್ಲಿ ಹೋಳಿಗೆ ಮಂಗಳದ್ರವ್ಯ. ಈ ಮಂಗಳದ್ರವ್ಯವು ಸಹ ಅಸುಚಿ ಪದಾರ್ಥಗಳ, ಅಸುಚಿ ಪ್ರಾಣಿಗಳ ಸ್ಪರ್ಶದಿಂದ ಅಮಂಗಳವಾಗುವುದು. ಭಗವಂತನನಾಮ ಅಮಂಗಳಮಯದ್ರವ್ಯಗಳನ್ನು ಸಹ ಮಂಗಳಮಯಗಳನ್ನಾಗಿ ಮಾಡುವ ಪರಮಮಂಗಳವಾದದ್ದು. ಪರಮಪಾಪಿಯಾದ ಅಜಾಮಿಳನ ಪಾಪಗಳನ್ನೆಲ್ಲಾ ತರಿದೋಡಿಸಿ, ಅವನನ್ನು ಪಾವನಗೊಳಿಸಿತು ಶ್ರೀನಿವಾಸನ ನಾಮ. ಗಜೇಂದ್ರನ ಆಪತ್ತನ್ನು ಕಳೆಯಿತು. ನಾರದನ ನೀಚಯೋನಿಯನ್ನು ಕಳೆದು. ದ್ರೌಪದಿಯ ಮಾನವನ್ನು ರಕ್ಷಿಸಿ, ಅಹಲ್ಯೆಯನ್ನು ಉದ್ಧರಿಸಿತು ನಾರಾಯಣನ ನಾಮ. ಯಾವನ ನಾಲಿಗೆಯಲ್ಲಿ ಭಗವಂತನ ನಾಮಗಳು ಸದಾ ನರ್ತಿಸುವವೋ, ಅವನು ನಾಯಿಮುಂತಾದ ಪ್ರಾಣಿಗಳನ್ನು ತಿನ್ನು1ಶ್ರೇಷ್ಠನೂ, ಪವಿತ್ರನೂ ಎನಿಸುವನು. ಇದನ್ನೇ ವೇದವ್ಯಾಸರು

**"ಅಹೋ ಬತ ಶ್ವಪಚೋಽತೋ ಗರಿಯಾನ್**
**ಯಜ್ಜಿಹ್ವಾಗ್ರೆ ವರ್ತತೇ ನಾಮ ತುಭ್ಯಮ್ ॥"**

– ಎಂದು ಹೇಳಿ ಸ್ಪಷ್ಟಬಡಿಸಿರುವರು.



ಸುಲಭಸಾಧನೆಗಳಲ್ಲಿ ಅತ್ಯಂತ ಸುಲಭಸಾಧನೆ ಎನಿಸಿದ, ಹರಿನಾಮವನ್ನು ಸವಿಯುತ್ತಾ, ಸುಖಪಡದ ಮಾನವನ ಜನ್ಮವ್ಯರ್ಥ. ಭಗವಂತನಿಗೆ ಸಂಬಂಧಿಸಿದವುಗಳೆಲ್ಲಾ ಭಾಗವತಗಳೆನಿಸುವವು. ನಾಮ–ರೂಪ–ಕ್ರಿಯೆ–ಗುಣಗಳೆಲ್ಲವೂ ಭಾಗವತಗಳೇ. ರಸ ಸ್ವರೂಪವಾದ ಹರಿನಾಮಭಾಗವ ತವನ್ನು ನಿರಂತರ ಸವಿಯಬೇಕು. ಇದನ್ನೇ ವೇದವ್ಯಾಸರು "ರಸಿಕಾಃ ಭುವಿ ಭಾವುಕಾಃ ಮುಹುಃ ಮಹುಃ ಆಲಯಂ ಭಾಗವತಂ ರಸಂ ಪಿಬತ" ಎಂದು ಹೇಳಿ ಸಮರ್ಥಿಸಿರುವರು.

ಮಂಗಳಕರಗಳಾದ ಭಗವಂತನ ನಾಮರೂಪಗಳನ್ನು ಕೇಳಿದ, ಸ್ಮರಿಸಿದ, ಚಿಂತಿಸಿದ ವ್ಯಕ್ತಿ ಸಂಸಾರಬಂಧನಕ್ಕೆ ಸಿಕ್ಕಿ ಬೀಳುವುದಿಲ್ಲ. ಅಂಥವನ ಮನಸ್ಸು ಸದಾ ಪರಮಾತ್ಮನ ಪಾದಪದ್ಮಗಳಲ್ಲಿ ತಲ್ಲೀನವಾಗುತ್ತದೆ. ಇದು ಭಾಗವತದ ನಿಶ್ಚಿತಾಭಿಪ್ರಾಯ.

**"ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್**
**ನಾಮಾನಿ ರೂಪಾಣಿ ಚ ಮಂಗಲಾನಿ ತೇ**
**ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋಃ**
**ಆವಿಷ್ಟ ಚಿತ್ತೋ ನ ಭವಾಯ ಕಲ್ಪ್ಯತೇ ॥"**

ಭಗವಂತನ ನಾಮ ಎಲ್ಲೆಲ್ಲೂ, ಸದಾ ಸುಲಭವಾಗಿ ದೊರೆಯುವ ನಿಧಿ, ಇದು ನಿತ್ಯಾನಂದವನ್ನು ಕರುಣಿಸುವ ನಿಧಿ. ಅಪಹರಿಸಲು ಸಾಧ್ಯವಾಗದ ನಿಧಿ. ಬಳಸಿದಷ್ಟೂ ಬೆಳೆಯುವ ನಿಧಿ. ಬಂಧನವನ್ನು ಬಿಡಿಸುವ ನಿಧಿ.

ಈ ಅಪೂರ್ವನಿಧಿಗೆ ಮನಸೊಲದ ಮಾನವ, ಹುಟ್ಟುಸಾವುಗಳಿಗೆ ಕಾರಣಗಳಾದ, ಹೇಯುಗಳೂ, ನಶ್ವರಗಳೂ ಆದ ಪ್ರಾಪಂಚಿಕವಿಷಯುಗಳಿಗೆ ಮನಸೋತು ನಾಯಿಯಂತಾಗಿರುವನು. ನಾಯಿ ಮೃಷ್ಟಾವನ್ನು ಬಿಟ್ಟು ಎಲುಬಿನ ತುಂಡಿಗಾಗಿ ಓಡುವಂತಾಗಿದೆ ಮಾನವನ ಪರಿಸ್ಥಿತಿ. ಇದನ್ನು ಕಂಡು ಮನನೊಂದ ದಾಸರು, ಯಾರಿಗೂ ನೋವಾಗಬಾರದೆಂಬ ಭಾವನೆಯಿಂದ ಎಲ್ಲವನ್ನು ತಮ್ಮ ಮೇಲೆ ಆರೋಪಿಸಿಕೊಂಡು ಹೇಳುತ್ತಾರೆ.

**"ನಿನ್ನ ನಾಮ ಹೋಳಿಗೆ ಶ್ರೀನಿವಾಸ ಕಳ್ಳ–**
**ಕುನ್ನಿ ನಾನಾಗಿಹೆ ಶ್ರೀನಿವಾಸ"** ಎಂದು.

ಜ್ಞಾನಭಕ್ತಿವೈರಾಗ್ಯಗಳಿಂದ ತುಂಬಿ ತುಳುಕುವ ಜ್ಞಾನಿಗಳೆಲ್ಲರೂ, ಪರೋಪದೇಶದಲ್ಲಿ ಪಾಂಡಿತ್ಯವನ್ನು ಹೆಚ್ಚಾಗಿ ತೋರುವುದಿಲ್ಲ. ಪರರ ದೋಷಗಳನ್ನು ಎಣಿಸದ ದಾಸರು, ತಮ್ಮನ್ನೇ ದೋಷಿಗಳನ್ನಾಗಿ ತೋರುತ್ತಾ, ವಿನಯವನ್ನು ಪ್ರದರ್ಶಿಸುವರು.

ಪ್ರಕೃತದಲ್ಲಿ ಪ್ರಸನ್ನವೆಂಕಟದಾಸರು ಸಹ ತಮ್ಮನ್ನೇ ನಾಯಿಯಕುನ್ನಿಗೆ ಹೋಲಿಸಿಕೊಂಡು, ಸಾಧಕಜೀವಿಗಳೆಲ್ಲರಿಗೂ ಆತ್ಮವಿಮರ್ಶೆಮಾಡಿಕೊಳ್ಳಲು ಎಚ್ಚರಿಕೆ ನೀಡಿರುವರು. ಶ್ರೀನಿವಾಸನ ಪರಮಾನುಗ್ರಹಕ್ಕೆ ಪಾತ್ರರಾಗಿ, ಆಪ್ರಭುವನ್ನು ಕಣ್ಣಾರೆ ಕಂಡು ಆನಂದಿಸಿ, ತಾವು ಕುಣಿದು, ಕರುಣಾಮಯಕೃಷ್ಣನನ್ನು ಕುಣಿಸಿದ ಧನ್ಯಜೀವಿಗಳು ಪ್ರಸನ್ನವೇಂಕಟದಾಸರು. ಜ್ಞಾನಿಗಳ ಬಗ್ಗೆ ಈ ಎಚ್ಚರಿಕೆ ಸದಾ ನಮಗಿರಬೇಕು.

ಮಾಡಿದ ತಪ್ಪಿಗೆ ಫಲವನ್ನಸುಭವಿಸಲೇಬೇಕು. ಇದರ ಬಗ್ಗೆ ಹರಿದಾಸರೆಲ್ಲರೂ ಎಚ್ಚರಿಕೆ ನೀಡಿರುವರು. ಮಾಡಿದ ತಪ್ಪುಗಳಿಗೆಲ್ಲಾ ಸಾಕ್ಷಿಯಾಗಿ ಇಡೀ ದೇಹವನ್ನು ವ್ಯಾಪಿಸಿ ತತ್ತ್ವಾಭಿಮಾನಿದೇವತೆಗಳು ನಿಂತಿರುತ್ತಾರೆ. ಬೆಕ್ಕು ಹಾಲು ಕುಡಿಯುವಾಗ ಕಣ್ಣು ಮುಚ್ಚಿಕೊಂಡು ತನ್ನನ್ನು ಯಾರೂ ನೋಡುವುದಿಲ್ಲವೆಂದು ಭಾವಿಸುತ್ತದೆ. ಇದರಂತಾಗಿದೆ ಜೀವಿಯ ವ್ಯವಹಾರ. ಪ್ರತಿಸಾಧಕಜೀವಿ ತಾನು ಮಾಡುವ ತಪ್ಪುಗಳನ್ನು ತತ್ತ್ವಾಭಿಮಾನಿದೇವತೆಗಳು, ಅವರ ಅಂತರ್ಯಾಮಿಯಾದ ಭಾರತೀರಮಣಮುಖ್ಯಪ್ರಾಣನು, ಅವನ ಅಂತರ್ಯಾಮಿಯಾದ ರಮಾಪತಿನಾರಾಯಣನೂ, ಸದಾ ನೋಡುತ್ತಿರುತ್ತಾರೆಂದು ಚಿಂತಿಸಿದಲ್ಲಿ, ತಪ್ಪುಗಳಿಗೆ ಅವಕಾಶವಿರುವುದಿಲ್ಲ. ಈ ಎಚ್ಚರಿಕೆಯನ್ನು ಕಳಕೊಂಡ ವ್ಯಕ್ತಿ, ಶಿಕ್ಷೆಗಳನ್ನನುಭವಿಸಲು ಸಿದ್ಧನಾಗಬೇಕು. "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಸಂಸಾರದಲ್ಲಿರುವ ಜೀವಿ ತಾನು ಮಾಡಿದ ಶುಭಾಶುಭಕರ್ಮಗಳಿಗನುಗುಣವಾದ ಶುಭಾಶುಭಫಲಗಳನ್ನು ಅನುಭವಿಸಲೇಬೇಕಾಗುವುದು. ಭಗವತ್ಸೇವಾರೂಪ ಶುಭ ಕರ್ಮಗಳನ್ನಾಚರಿಸಿದರೆ, ಸುಖರೂಪ ಫಲಗಳು ದೊರೆಯುತ್ತವೆ. ಭಗವದ್ವಿಸ್ಮೃತಿಯಿಂದ ಮಾಡಿದ ಅಶುಭಕರ್ಮಗಳಿಂದ ಕಷ್ಟರೂಪಫಲಗಳು ಬಂದೆ ಬರುತ್ತವೆ. ಅವನ್ನು ಅನುಭವಿಸಲೇಬೇಕು. ಮಾಡಿದ ತಪ್ಪುಗಳನ್ನು ಚಿಂತಿಸದೆ, ಪಶ್ಚಾತ್ತಾಪಪಡದೆ. ಬಂದ ಕಷ್ಟಗಳಿಗೆ ಭಗವಂತನನ್ನು ನಿಂದಿಸುವುದು ಕಲಿಯುಗದ ಮಾನವನ ಲಕ್ಷಣವಾಗಿದೆ. ಇದು ಬೇಡ ಎನ್ನುತ್ತಾರೆ ಪ್ರಸನ್ನವೆಂಕಟದಾಸರು, ಬಂದದ್ದನ್ನು ಅನುಭವಿಸು ಮುಂದೆ ತಪ್ಪುಮಾಡದಂತೆ ಎಚ್ಚರವಹಿಸು.

ಭಗವಂತನ ಸೇವಕರಾಗಿ, ಅವನ ಆಜ್ಞಾನವರ್ತಿಗಳಾಗಿ, ಅವನವರೆನಿಸಿಕೊಂಡವರು ತತ್ತ್ವಾಭಿಮಾನಿದೇವತೆಗಳು. ಭಗವದಾಜ್ಞೆಗನುಗುಣವಾಗಿ ಆ ದೇವತೆಗಳು, ಸಾಧನಶರೀರವನ್ನು ಸಾರ್ಥಕ ಮಾಡಿಕೊಳ್ಳದೆ, ಶ್ರೀನಿವಾಸನ ನಾಮ–ರೂಪ–ಗುಣಕ್ರಿಯಾ–ಧರ್ಮಗಳನ್ನು ಸ್ಮರಿಸದೆ, ವ್ಯರ್ಥಕಾಲಕಳೆದ ಜೀವಿಗೆ ಶಿಕ್ಷೆಗಳನ್ನು ಕೊಟ್ಟು ದಂಡಿಸುವರು. ಇದನ್ನೆ ಹೇಳುತ್ತಾರೆ. ಪ್ರಸನ್ನವೆಂಕಟದಾಸರು –

**"ಕಟ್ಟಿ ನಿನ್ನವರೊದ್ದರೆ ಶ್ರೀನಿವಾಸ ನನ**
**ಗಿನ್ನು ಲಜ್ಜೇತಕೆ ಶ್ರೀನಿವಾಸ"** ಎಂದು.

ಪುರಾಣಪ್ರಪಂಚದಲ್ಲಿ ಮಹಾಪಾಪಿಗಳೆಂದು ಪ್ರಸಿದ್ಧರಾದವರು ಇಬ್ಬರು. ಅವರೇ ಅಜಾಮಿಳ ಮತ್ತು ಮಾಧವ. ಇಬ್ಬರೂ ಒಂದು ಕಾಲದಲ್ಲಿ ಸದಾಚಾರಸಂಪನ್ನರಾಗಿ, ಸದ್ಧರ್ಮಾಚರಣಶೀಲರಾಗಿ ಬಾಳಿ ಬದುಕಿದವರು. ಪ್ರಾರಬ್ಧಕ್ಕನುಗುಣವಾಗಿ, ಜೀವನದ ಮಧ್ಯದಲ್ಲಿ, ವೇಶ್ಯಾಲೋಲುಪರಾಗಿ, ಜೀವನವನ್ನು ಹಾಳುಮಾಡಿಕೊಂಡರು. ಮೊದಲನೆಯವನಾದ ಅಜಾಮಿಳನು ಅಂತ್ಯಕಾಲದಲ್ಲಿ ಅನಂತನನಾಮವನ್ನು ಸ್ಮರಿಸಿ, ಅಂತಕನದೂತರಿಂದ ದೂರಾಗಿ, ಮುಕ್ತಿ ಮಾರ್ಗದಲ್ಲಿ ಪಯಣಿಸಿದವನು. ಭವಿಷ್ಯೋತ್ತರ ಪುರಾಣದ ಶ್ರೀನಿವಾಸಕಲ್ಯಾಣಕಥೆಯಲ್ಲಿ ಬರುವ ಮಾಧವನು, ಕುಂತಲೆಯೆಂಬ ವೇಶ್ಯೆಯ ಸಂಸರ್ಗದಿಂದ, ಮಾಡಬಾರದ ಪಾಪಗಳನ್ನೆಲ್ಲಾ ಮಾಡಿ, ಪರಮಹೇಸಿಎನಿಸಿದ. ಪಾಪಿಗಳಲ್ಲೆ ಅಗ್ರಗಾಮಿಯಾದನು. ಆದರೆ ಕೊನೆಯ ಕಾಲದಲ್ಲಿ, ಜನ್ಮಜನ್ಮಾಂತರಗಳ ಸುಕೃತ ಫಲಗಳಿಂದ,



ಅವನಿಗೆ ಹರಿದಾಸರ ಸಂಗದೊರೆಯಿತು. ಅವರ ಭಗವತ್ಸಂಬಂಧಿ ಹಿತನುಡಿಗಳನ್ನು ಕೇಳುತ್ತಾ, ಅವರನ್ನು ಸೇವಿಸುತ್ತಾ, ಅವರು ಹಾಕಿದ ಹರ್ಯರ್ಪಿತ ಅನ್ನವನ್ನು ಉಣ್ಣುತ್ತಾ, ಅವರ ಸಂಗದಲ್ಲಿ ಕೊನೆಗೊಂದು ದಿನ ಮಾಡಿದ ತಪ್ಪುಗಳನ್ನು ನೆನೆದು, ಪಶ್ಚಾತ್ತಾಪದಿಂದ

**"ಅಪರಾಧಿ ನಾನಲ್ಲ ಅಪರಾಧ ಎನಗಿಲ್ಲ**
**ಕಪಟನಾಟಕ ಸೂತ್ರಧಾರೀ ॥"** ಎಂದು ಹೇಳುತ್ತಾ ಕಣ್ಣೀರಿಟ್ಟನು.

ಹರಿದಾಸರ ಸಂಗದ ಫಲಫಲಿಸಿತು. ವೆಂಕಟಾದ್ರಿಯ ಸ್ಪರ್ಶಮಾತ್ರದಿಂದ ಪೂತನಾದ. ವಿಗತಪಾಪನಾಗಿ, ಶ್ರೀನಿವಾಸನಿಗೆ ಮಾವನಾಗುವ ಭಾಗ್ಯವನ್ನು ಪಡೆದನು. ಆಕಾಶರಾಜನಾಗಿ ಶ್ರೀನಿವಾಸನ ಪಾದಪದ್ಮಗಳನ್ನು ತೊಳೆದು, ಕನ್ಯಾದಾನಸಂಕಲ್ಪಪೂರ್ವಕ ಪದ್ಮಾವತಿಯನ್ನು ಶ್ರೀನಿವಾಸನಿಗೆ ಧಾರೆಎರೆದ ಹರಿದಾಸರ ಸಂಗದ ಫಲ ಅಸದೃಶವಾದದ್ದು. ವಿಜಯದಾಸರು ಇದನ್ನು ಮನಮುಟ್ಟಿ ಹೊಗಳಿರುವರು.

**"ಹರಿಶರಣರ ಸಂಗ ದುರಿತಸಂಗ ಭಂಗ ।**
**ಹರಿಶರಣರ ಪತಿಕರಿಸಿಕೊಳ್ಳಲು ಗತಿ ।**
**ಹರಿಶರಣರ ನೋಟ ಹರಹಲು ಶುದ್ಧದೂಟ ।**
**ಹರಿಶರಣರ ಸಂದರುಶನವೇ ಲೇಸು ।**
**ಹರಿಶರಣರು ಇದ್ದಾಗಾರವೆ ಪ್ರಸಿದ್ಧ ।**
**ಹರಿಶರಣರ ಕೀರ್ತಿ ಅರಿದವ ಗುಣಪೂರ್ತಿ ।**
**ಹರಿಶರಣರ ಲೀಲೆ ವಿರಚಿಸಲು ಮೇಲು ।**
**ಹರಿಶರಣರ ಸೇವೆ ಪರಿವುದು ಪಾಶವ**
**ಹರಿವರ್ಣಾ ವಿಜಯವಿಠಲನಿತ್ಯ**
**ದೊರೆ ಎಂದವನು ಶರಣನು ಕಾಣಿರೋ ॥"**

ಸ್ವತಃ ಪ್ರಸನ್ನವೆಂಕಟದಾಸರೇ ಹರಿದಾಸರ ಸಂಗದ ಫಲವನ್ನು ವರ್ಣಿಸುತ್ತಾ –

**"ಸಂಗವಾಗಲಿ ಸಾಧು ಸಂಗವಾಗಲಿ**
**ಸಂಗದಿಂದ ಲಿಂಗದೇಹ ಭಂಗವಾಗಲಿ"** ಎಂದು ಹಾಡಿರುವರು.

ಹರಿದಾಸರ ಸಂಗದಿಂದ ಮಾಡಿದ ಪಾಪಗಳೆಲ್ಲಾ ಪರಿಹೃತವಾಗುವವು. ಅರಿಷಡ್ವರ್ಗಗಳು ದೂರಾಗಿ ಮನಸ್ಸು ನಿರ್ಮಲವಾಗುವುದು. ಜ್ಞಾನ–ವೈರಾಗ್ಯ–ಭಕ್ತಿಗಳು ಮೈಗೂಡುವವು. ಕ್ರಮವಾಗಿ ಲಿಂಗಶರೀರದ ಭಂಗಕ್ಕೂ ಈ ಸತ್ಸಂಗ ಕಾರಣವಾಗುವುದು. ಸಾಧಕಜೀವಿ ಸತ್ಸಂಗಕ್ಕಾಗಿ ಪ್ರಯತ್ನಿಸಬೇಕು.

ಈ ಹರಿದಾಸರ ಸಂಗದ ಮಹಿಮೆಯನ್ನು ಅದರಿಂದ ದೊರೆಯುವ ಲಾಭವನ್ನೂ, ಪ್ರಾಪಂಚಿಕವಿಷಯಗಳಿಂದ ನೊಂದು ಭೀತನಾದ ಜೀವಿಗೆ ದಾಸರು ನೀಡುವ ಸಾಂತ್ವನವನ್ನೂ ವಿವರಿಸುತ್ತಾ ಪ್ರಸನ್ನವೇಂಕಟದಾಸರು

**"ಹೇಸಿ ನಾನಾದರು ಶ್ರೀನಿವಾಸ ಹರಿ**
**ದಾಸರೊಳು ಪೊಕ್ಕೆ ಶ್ರೀನಿವಾಸ ಅವರ**
**ಭಾಷೆಯ ಕೇಳಿಹೆ ಶ್ರೀನಿವಾಸ ಆ**
**ವಾಸಿಯ ಸೈರಿಸೊ ಶ್ರೀನಿವಾಸ ।"**

ಎಂಬ ಈ ಏಳನೇ ಚರಣವನ್ನು ರಚಿಸಿರುವರು.

"ಶ್ರೀನಿವಾಸ! ನಾನು ಹೇಸಿಕೆಯ ಜೀವನವನ್ನು ನಡೆಸಿದವನು, ಏಕಾಶೇಂದ್ರಿಯಗಳಿಗೆ ಪ್ರೇರಕನಾಗಿ, ಶ್ರೀನಿವಾಸನೆಂದು ಪ್ರಸಿದ್ಧನಾದ ನೀನೇ ನನ್ನ ಸ್ವರೂಪಯೋಗ್ಯತೆಗನುಗುಣವಾಗಿ, ನನ್ನ ಉದ್ಧಾರಕ್ಕಾಗಿ, ಹರಿದಾಸರ ಸಂಗವನ್ನು ಕರುಣಿಸಿದೆ. ಈಗ ಆಸಂಗದಲ್ಲೆ ಕಾಲಕಳೆಯುತ್ತಿರುವೆನು. ಅದರ ಹಿತನುಡಿಗಳನ್ನು ಕೇಳಿರುವೆನು. ಅವು ನನ್ನಲ್ಲಿ ಧೈರ್ಯ ತುಂಬಿವೆ. ಈ ಬಾಡಿಗೆದಾರನ ತಪ್ಪುಗಳನ್ನೆಲ್ಲಾ ಮನ್ನಿಸಿ ರಕ್ಷಿಸು" ಇದು ಈಚರಣದ ತಾತ್ಪರ್ಯ.

ಮಾನವನ್ನು ತನ್ನ ಆತ್ಮೋದ್ಧಾರಕ್ಕಾಗಿ ನೇರವಾಗಿ ಹರಿಯನ್ನು ಉಪಾಸಿಸಬಾರದು. ಆ ಉಪಾಸನೆಯನ್ನು ಭಗವಂತನು ಸಹ ಒಪ್ಪುವುದಿಲ್ಲ. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಮುಕುತಿ" ಎಂದು ಹೇಳಿದ ಪುರಂದರದಾಸರು ಇದನ್ನೇ ಸಮರ್ಥಿಸಿರುವರು. ಗುರುವಿನ ದ್ವಾರಾ ಅಚ್ಯುತನ ಪ್ರಸಾದದೊರೆಯುವುದು. ಇದನ್ನು ಎಲ್ಲ ಹರಿದಾಸರು ಒಮ್ಮನಸ್ಸಿನಿಂದ ಅಂಗೀಕರಿಸಿರುವರು.

**"ಗುರುವೇ ತಾಯಿತಂದೆ ಗುರುವೆ ಮಮದೈವ**
**ಗುರುವೆ ಪರಿವಾರ ಗುರುವೆ ಗತಿನಿತ್ಯ**
**ಗುರುವೆ ಪಾಲಿಸೆಂದು ಗುರುಗಳ ಭಜಿಸಿ**
**ಗುರುವು ದೊರೆತರೆ ಹರಿತಾದೊರೆವನು**
**ಗುರುವು ಮರೆತರೆ ಹರಿತಾ ಮರೆವನು**
**ಗುರುಗಳ ಪಾದಶಿರಪರ್ಯಂತ**
**ಸ್ಮರಿಸಲು ಪಾಪಪರಿಹಾರವಾಗುವುದಯ್ಯಾ**
.....................................................
**ಹರಿಮುನಿದರೆ ಗುರು ಕರುಣಿಪನೊಮ್ಮಿಗೆ**
**ಗುರುಮುನಿದರೆ ಹರಿ ಪೊರೆಯ**
**ಹರಿಕೃಪಕೆ ಮುಖ್ಯ ಗುರುವೆ ಕಾರಣನೆಂದು**

ಗುರುಸ್ಥಾನೀಯರಾದ ಹರಿದಾಸರನ್ನು ಆಶ್ರಯಿಸಿದರೆ, ಅವರು ಸಾಧಕನಿಗೆ ಕರಾವಲಂಬನೆಯನ್ನು ಕೊಟ್ಟು ಕರುಣಿಸುವರು. ಅವನ ತಪ್ಪುಗಳನ್ನು ತಿಮ್ಮಪ್ಪನಿಗೆ ಒಪ್ಪಿಸಿ, ರಕ್ಷಿಸಲು ಪ್ರಾರ್ಥಿಸುವರು. ಭಗವಂತನ ಕಾರುಣ್ಯವನ್ನು ವಿವರಿಸಿ, ಸಾದಕನಲ್ಲಿ ಧೈರ್ಯತುಂಬುವರು. ಈ ಎಲ್ಲವನ್ನು ಬಲ್ಲದಾಸರು, ತಾವು ಭಗವಂತನನ್ನು ಪ್ರಾರ್ಥಿಸುತ್ತಾ, ನಮಗೂ ಪ್ರಾರ್ಥಿಸಲು ಆದೇಶ ನೀಡುತ್ತಿರುವರು.

**"ಹೇಸಿ ನಾನಾದರು ಶ್ರೀನಿವಾಸ ಹರಿ–**



**ದಾಸರೊಳು ಪೊಕ್ಕೆ ಶ್ರೀನಿವಾಸ ಅವರ**
**ಭಾಷೆಯ ಕೇಳಿಹೆ ಶ್ರೀನಿವಾಸ"**... ಎಂದು

ಈಚರಣದ ನಾಲ್ಕನೆಯ ಪಾದದಲ್ಲಿ ದಾಸರು ಬಳಸಿದ 'ಆವಾಸಿ' ಶಬ್ದಕ್ಕೆ ಬಾಡಿಗೆದಾರ ಎಂದು ಅರ್ಥ. ಕೆಲವುಪುಸ್ತಕಗಳಲ್ಲಿ ಈ ಶಬ್ದ 'ಆವಾಸೆ' ಎಂದು ತಪ್ಪಾಗಿ ಪ್ರಿಂಟಾಗಿದೆ.

ವಿಶ್ವವೆಲ್ಲವೂ ಚೇತನ ಅಚೇತನ ಎಂಬ ಎರಡು ಪದಾರ್ಥಗಳಿಂದ ತುಂಬಿದೆ. ಈ ಎಲ್ಲವನ್ನು ಸೃಷ್ಟಿಗೆ ತಂದವನು ಭಗವಂತನೆ. ಮಣ್ಣು–ನೀರು–ಬೆಂಕಿ–ಘಾಳಿ–ಆಕಾಶ ಮುಂತಾದ ಅಚೇತನ ಪದಾರ್ಥಗಳನ್ನು ಜೀವರ ಅನುಭವಕ್ಕಾಗಿ, ಅವರ ಸಾಧನೆಗಾಗಿ ಭಗವಂತನೇ ಸೃಷ್ಟಿಸಿಕೊಟ್ಟನು. ಎಲ್ಲವೂ ಅವನದೇ ಸಂಪತ್ತು. ಅವನು ಕರುಣಿಸಿಕೊಟ್ಟ ಈ ಸಂಪತ್ತನ್ನು ನಮ್ಮದನ್ನಾಗಿ ಚಿಂತಿಸಬಾರದು, ಒಳ್ಳೆಯ ಮನಸ್ಸುಳ್ಳ ಧನಿಕ, ತಾನು ಕಟ್ಟದ ಮನೆಯನ್ನು ಒಬ್ಬವ್ಯಕ್ತಿಗೆ ವಾಸಮಾಡಲು ಉಚಿತವಾಗಿ ಕೊಡುವನು. ಮನೆಯಲ್ಲಿ ವಾಸಮಾಡುವ ವ್ಯಕ್ತಿ "ಈ ಮನೆ ನನ್ನದಲ್ಲ; ಧನಿಕನದು. ನನ್ನ ಸುಖಕ್ಕಾಗಿ, ನನ್ನ ಸಾಧನೆಗಾಗಿ, ಧನಿಕಕೊಟ್ಟಿದ್ದಾನೆ. ಇದನ್ನು ಶುದ್ಧವಾಗಿಟ್ಟುಕೊಂಡು, ಅವನಿಗೇ ಮರಳಿ ಒಪ್ಪಿಸಬೇಕು" ಎಂದು ಸದಾಚಿಂತಿಸಬೇಕು. ಇದರಿಂದ ಮನೆಕೊಟ್ಟವ್ಯಕ್ತಿಗೆ ಆನಂದವಾಗುವುದು. ಹಾಗಲ್ಲದೆ ತಮ್ಮದಲ್ಲದ ಮನೆಯನ್ನು ತನ್ನದೆಂದು ಭಾವಿಸಿ, ಅದನ್ನು ಹಾಳು ಮಾಡಿದಲ್ಲಿ, ಯಜಮಾನನಿಗೆ ಕೋಪಉಂಟಾಗುವುದು. ಅನರ್ಥಗಳಾಗುವವು.

ಇದನ್ನು ಚೆನ್ನಾಗಿ ಬಲ್ಲ ಪ್ರಸನ್ನವೆಂಕಟದಾಸರು, ಶ್ರೀನಿವಾಸ! ನಂದೇನದೋ ಸ್ವಾಮಿ ನಿಂದೇ ಇದೆಲ್ಲವೂ ಎಂದು ಹೇಳಬೇಕಾದ ನಾನು, ವ್ಯಾಮೋಹದಿಂದ ಎಲ್ಲವೂ ನನ್ನದೆಂದು ಭಾವಿಸಿದೆ. ಅಪಚಾರ ಮಾಡಿದೆ. ಈತಪ್ಪನ್ನು ಮನ್ನಿಸಿ ಉದ್ಧರಿಸು, ಎಂದು ಪ್ರಾರ್ಥಿಸುತ್ತಾ

'ಆವಾಸಿಯ ಸೈರಿಸೋ ಶ್ರೀನಿವಾಸ' ಎಂದು ಹಾಡಿರುವರು.

**"ತಿಂಗಳವನಲ್ಲ ಶ್ರೀನಿವಾಸ ವತ್ಸ –**
**ರಂಗಳನಲ್ಲ ಶ್ರೀನಿವಾಸ ರಾ–**
**ಜಂಗಳ ಸವಡಿಪೆ ಶ್ರೀನಿವಾಸ ಭ**
**ವಂಗಳ ದಾಟುವೆ ಶ್ರೀನಿವಾಸ ।"**

ಇದು ಕೃತಿಯ ಎಂಟನೆಯ ಚರಣ. ಈ ಚರಣದಲ್ಲಿ ದಾಸರು ಶ್ರೀನಿವಾಸನ ದಾಸ್ಯವನ್ನು ಅಪೇಕ್ಷಿಸುತ್ತಿರುವರು. ಈಚರಣದಾಸರ ನಿರಹಂಕಾರತೆಗೆ ಕೈಗನ್ನಡಿಯಾಗಿದೆ. ದಾಸರು ಶ್ರೀನಿವಾಸನಲ್ಲಿ ತಮ್ಮನ್ನು ಸಂಬಳಕ್ಕಿಟ್ಟುಕೊಳ್ಳಲು ಪ್ರಾರ್ಥಿಸುತ್ತಾ, ತಮ್ಮಯೋಗ್ಯತೆಯನ್ನೂ, ತಮ್ಮ ನಿಶ್ಚಯವನ್ನೂ ಸ್ಪಷ್ಟಬಡಿಸುತ್ತಿರುವರು.

ಈಚರಣದಲ್ಲಿರುವ ತಿಂಗಳು, ವತ್ಸರಂಗಳು, ರಾಜಂಗಳು, ಸವಡಿಪೆ ಎಂಬ ಈ ನಾಲ್ಕು ಶಬ್ದಗಳಿಗೆ ಅರ್ಥಗಳನ್ನು ತಿಳಿಯಬೇಕು. ತಿಂಗಳು ವತ್ಸರಂಗಳು ಎಂಬ ಶಬ್ದಗಳಿಗೆ ಮಾಸ–ವರ್ಷಗಳು ಎಂಬ ಅರ್ಥಗಳು ಪ್ರಸಿದ್ಧವಾದವುಗಳು. ಮಾಸ–ವತ್ಸರಗಳಿಗೆ ಸಾಂಪ್ರದಾಯಿಕವಾಗಿ ಮತ್ತೊಂದು ರೀತಿಯಿಂದ ಅರ್ಥಹಚ್ಚುವುದು ಬಳಕೆಯಲ್ಲಿದೆ. ಚೈತ್ರವೈಶಾಖಾದಿ 12 ತಿಂಗಳುಗಳುಗಳ ಹೆಸರುಗಳನ್ನು ತೆಗೆದುಕೊಂಡು, ಅವುಗಳಲ್ಲಿ ಪ್ರಕೃತಕ್ಕೆ

ಸರಿಹೋಗುವ ಯಾವುದಾದರೂ ಒಂದೋಎರಡೋತಿಂಗಳುಗಳ ಹೆಸರುಗಳನ್ನು ಪ್ರಕೃತಕೃತಿಯಲ್ಲಿ ಬಳಸಿದ ತಿಂಗಳು ಶಬ್ದಕ್ಕೆ ಅರ್ಥವನ್ನಾಗಿ ಸ್ವೀಕರಿಸುವುದು ಒಂದು ಸಂಪ್ರದಾಯ.

ಈ ದೃಷ್ಟಿಯಲ್ಲಿ ಪ್ರಕೃತ ಚರಣದಲ್ಲಿ ದಾಸರು ಬಳಸಿದ ತಿಂಗಳು ಮತ್ತು ವತ್ಸರ ಶಬ್ದಗಳಿಗೆ ಹೊಸ ಅರ್ಥವನ್ನು ಹಚ್ಚಬಹುದು. ಪ್ರಸನ್ನ ವೇಂಕಟದಾಸರು ಚರಣದಲ್ಲಿ ತಿಂಗಳು ಶಬ್ದವನ್ನು ಏಕವಚನದಲ್ಲೂ, ವತ್ಸರ ಶಬ್ದವನ್ನುಬಹುವಚನದಲ್ಲೂ (ವತ್ಸರಂಗಳು ಪ್ರಯೋಗಿಸಿರುವರು. ತಿಂಗಳು ಶಬ್ದಕ್ಕೆ ಜೇಷ್ಠಎಂಬ ಹೆಸರಿನ ತಿಂಗಳನ್ನು ಅರ್ಥವಾಗಿ ತೆಗೆದುಕೊಂಡಲ್ಲಿ, ತಿಂಗಳವನಲ್ಲಎಂದರೆ ಜೇಷ್ಠನಲ್ಲ ಎಂದು ಅರ್ಥವಾಗುವುದು. ಇದರಂತೆ ವತ್ಸರ ಶಬ್ದಕ್ಕೆ ವಿಭವ–ಪ್ರಮೋದ–ವಿಕ್ರಮ–ಸರ್ವಜಿತ್– ಸರ್ವಧಾರಿಗಳೆಂಬ ವತ್ಸರಗಳ ಹೆಸರುಗಳನ್ನು ಅರ್ಥವಾಗಿ ತೆಗೆದುಕೊಂಡಲ್ಲಿ, ಶ್ರೀನಿವಾಸ ನಾನು ವಿಭವವುಳ್ಳವನಲ್ಲ; ಪ್ರಮೋದವುಳ್ಳವನಲ್ಲ; ವಿಕ್ರಮವುಳ್ಳವನಲ್ಲ; ಸರ್ವಜಿತ್‌ಅಲ್ಲ, ಸರ್ವಧಾರಿಯಲ್ಲ; ಎಂಬ ಅರ್ಥಗಳು ವ್ಯಕ್ತವಾಗುವವು. ದಾಸರು ತಿಂಗಳವನಲ್ಲ ಎಂದು ಹೇಳಿ ಪ್ರಭೋಶ್ರೀನಿವಾಸ! ನಾನು ಜೇಷ್ಠನಲ್ಲ; ಶ್ರೇಷ್ಠನಲ್ಲ; ಬಹಳಅಲ್ಪ; ನಿನ್ನದಾಸ; ನಿನ್ನದಾಸರ ದಾಸರ ಮನೆಯ ದಾಸ ನಾನು ಎಂದು ಹೇಳಿಕೊಂಡಿರುವರು. ಇದರಿಂದ ದಾಸರ ನಿರಹಂಕಾರತೆ, ವಿನಯ ಹಾಗೂ ದಾಸ್ಯಭಾವಗಳು ಸ್ಪಷ್ಟವಾಗುವವು. ದಾಸನಾಗದೆ ಶ್ರೀಶನಅನುಗ್ರಹ ದೊರೆಯದು ದಾಸನಾಗಲು ನಾವು ಅಹಂಕಾರ ರಹಿತರಾಗಬೇಕು. ವಿನಯಭೂಷಿತರಾಗಬೇಕು. ನಾನು ನನ್ನದು ಎನ್ನುವುದನ್ನು ಬಿಟ್ಟು, ನೀನು ನಿನ್ನದು ಎಂದು ಸದಾಚಿಂತಿಸಬೇಕು. ದಾಸನಾದವನಿಗೆ ಭವಪಾಶನೀಗುವುದು.

ದಾಸರವಿಜ್ಞಾಪನೆ ಇಷ್ಟಕ್ಕೆ ಮುಗಿಯಲಿಲ್ಲ. ಪ್ರಭೋಶ್ರೀನಿವಾಸ! ನಾನು ವತ್ಸರಂಗಳವನಲ್ಲ. ನನ್ನಲ್ಲಿ ಯಾವತರಹದ ಲೌಕಿಕವಿಭವಗಳೂ ಇಲ್ಲ. ಜೀವನದ ಉದ್ಧಾರಕ್ಕೆ ಕಾರಣಗಳಾದ ಜ್ಞಾನ–ವೈರಾಗ್ಯ–ಭಕ್ತಿಗಳೆಂಬ ಸಂಪತ್ತುಗಳೂ ನನ್ನಲ್ಲಿಲ್ಲ. ಇದರಿಂದಾಗಿ ಪ್ರಮೋದರಹಿತ ನಾಗಿದೇನೆ. ನಿನ್ನ ಸ್ಮರಣೆ, ಚಿಂತನೆ ಕೀರ್ತನೆ ದರ್ಶನಗಳಿಂದ ದೂರಾಗಿರುವುದರಿಂದ ಆಧ್ಯಾತ್ಮಿಕವಾದ ಆನಂದವನ್ನು ಅನುಭವಿಸದೇ ಇರುವೆನು. ಶ್ರೀನಿವಾಸ! ನಿನ್ನ ಸರ್ವೋತ್ತಮತ್ತ್ವವನ್ನು ಅಲ್ಲಗಳೆಯುವ ದುರ್ವಾದಿಗಳನ್ನು, ಹರಿದಾಸರಂತೆ ಎದುರಿಸುವ ವಿಕ್ರಮವಿಲ್ಲದೆ ಹೇಡಿಯಾಗಿರುವೆನು. ಇದರಿಂದಾಗಿ ನಾನು ಎಲ್ಲವನ್ನು ಗೆಲ್ಲದವನಾಗಿದ್ದೇನೆ. (ಸರ್ವಜಿತ್ ಅಲ್ಲ) ನನ್ನಲ್ಲಿರುವ ಪಂಚಜ್ಞಾನೇಂದ್ರಿಯಗಳು ಪಂಚಕರ್ಮೇಂದ್ರಿಯಗಳು. ಮನಸ್ಸು ಇವೇ ನನಗೆ ಶತ್ರುಗಳಾಗಿ ಇದನ್ನು ಗೆಲ್ಲಲು ಸಾಮರ್ಥ್ಯವಿಲ್ಲದವನಾಗಿದ್ದೇನೆ. ಇಲ್ಲಿಯವರೆವಿಗೆ ಒಂದು ಇಂದ್ರಿಯದ ಜಯವೂ ನನ್ನಿಂದಾಗಿಲ್ಲ; ಯಾವಭಾರವನ್ನೂ ಹೊರದ ವ್ಯಕ್ತಿನಾನು. ಆದರೆ ನಿನ್ನ ಸೇವಕನಾಗಿ ಬಾಳಬೇಕೆಂಬ ಹಂಬಲಮಾತ್ರ ಹೆಚ್ಚಾಗಿದೆ. ಕಾರಣ ತಂದೇ! ಶ್ರೀನಿವಾಸ! ನಿನ್ನ ಮಂದಿರಗಳ ಅಂಗಳಗಳನ್ನು ಶುದ್ಧಮಾಡುವ ಕೆಲಸವನ್ನು ಕರುಣಿಸಿ ಅನುಗ್ರಹಿಸು ಎಂದು ಪ್ರಾರ್ಥಿಸಿರುವರು.

**ಈ ತಾತ್ಪರ್ಯಾರ್ಥಗಳು**

**"ತಿಂಗಳವನಲ್ಲ ಶ್ರೀನಿವಾಸ ವತ್ಸ –**
**ರಂಗಳವನಲ್ಲ ಶ್ರೀನಿವಾಸ ರಾ –**
**ಜಂಗಳಸವಡಿಪೆ ಶ್ರೀನಿವಾಸ"**



– ಎಂಬ ಈ ಮೂರು ಪಾದಗಳಿಂದ ವ್ಯಕ್ತವಾಗುತ್ತಿವೆ. ಈಮೂರು ಪಾದಗಳು ಮತ್ತೊಂದು ಅರ್ಥದಲ್ಲೂ ತಮ್ಮನ್ನು ತಾವು ತೆರೆದುಕೊಳ್ಳುತ್ತವೆ. ಈ ಸಮಾಜದಲ್ಲಿ ನಶ್ವರಗಳಾದ ಲೌಕಿಕಾಪೇಕ್ಷೆಗಳಿಂದ ಭಗವದಾರಾಧನೆ ಮಾಡುವವರೆ ಹೆಚ್ಚು. ಕರ್ತವ್ಯ ಬುದ್ಧಿಯಿಂದ, ನಿರ್ವ್ಯಾಜವಾಗಿ, ಫಲಾಪೇಕ್ಷೆಯಿಲ್ಲದೆ ಸ್ವಾಮಿಗೆ ಸೇವೆಸಲ್ಲಿಸುವ ಜನರು ವಿರಳ. ಇದರಿಂದಾಗಿ ದಾಸರಾಗಿ ಭಕ್ತಿಯಿಂದ ಸೇವೆಸಲ್ಲಿಸುವ ಕಾಲ ಬಹುಅಲ್ಪವಾಗಿರುತ್ತದೆ. ಈ ವ್ಯವಹಾರ ಫಲಪ್ರಾಪ್ತಿಯವರೆವಿಗೆ ಮಾತ್ರ. ಫಲದೊರೆತೊಡನೆ ಭಕ್ತಿ–ಸೇವೆ ದಾಸ್ಯಗಳೆಲ್ಲವೂ ಕಣ್ಮರೆಯಾಗುತ್ತವೆ. ಇದು ತಾರಕವಲ್ಲ. ಜೀವ–ಪರಮಾತ್ಮರಲ್ಲಿರುವ ದಾಸ ಈಶ ಭಾವವು ಅನಾದಿಸಿದ್ಧವಾದದು. ಭಗವಂತ ಸದಾ ಈಶ; ಜೀವಿ ಸದಾ ಅವನ ದಾಸ. ಫಲಾಪೇಕ್ಷೆ ಇಲ್ಲದೆ ಪ್ರೇಮಪ್ರವಾಹರೂಪವಾದ ಭಕ್ತಿಯಿಂದ ಭಗವಂತನಿಗೆ ಸೇವೆಸಲ್ಲಿಸುವುದೇ ಜೀವಿಯ ಮುಖ್ಯಕರ್ತವ್ಯ. ಈ ದಾಸ–ಸೇವಾ ಸ್ವರೂಪಗಳನ್ನು ಸಮಾಜಕ್ಕೆ ತಿಳಿಸುವ ಸದುದ್ದೇಶದಿಂದಲೇ ಪ್ರಸನ್ನವೇಂಕಟದಾಸರು.

**"ತಿಂಗಳವನಲ್ಲ ಶ್ರೀನಿವಾಸ ವತ್ಸ–**
**ರಂಗಳವನಲ್ಲ ಶ್ರೀನಿವಾಸ ರಾ–**
**ಜಂಗಳ ಸವಡಿಪೆ ಶ್ರೀನಿವಾಸ"** ಎಂದು ಹಾಡಿರುವರು.

ಪ್ರಸನ್ನವೇಂಕಟದಾಸರು ಶ್ರೀನಿವಾಸನಲ್ಲಿ, ತಮ್ಮನ್ನು ದಾಸನನ್ನಾಗಿ ಅಂಗೀಕರಿಸಿ ಸಂಬಳಕ್ಕಿಟ್ಟುಕೊಳ್ಳಬೇಕಾಗಿ ಬೇಡಿದರು. ದಾಸರನ್ನು ಶ್ರೀನಿವಾಸ ಕೇಳಿದ– "ಎಷ್ಟು ಕಾಲ ನನಗೆ ದಾಸನಾಗಿ ಇರುತ್ತೀ? ನಿನ್ನ ಅಪೇಕ್ಷೆ ಏನು?" ಎಂದು. ಭಗವಂತನ ಪ್ರಶ್ನೆಗೆ ದಾಸರುಕೊಟ್ಟ ಉತ್ತರ ಇದು.– "ಶ್ರೀನಿವಾಸ ನನ್ನ ನಿನ್ನ ನಂಟು ಅನಾದಿ. ನೀನು ಆದಿ–ಅಂತಗಳಿಲ್ಲದ ಪುರಾಣಪುರುಷ. ನಾನು ಸಹ ಆದಿ–ಅಂತಗಳಿಲ್ಲದ ಪುರಾಣಪುರುಷ. ನೀನು ಸದಾಈಶ. ನಾನು ಸದಾ ನಿನ್ನ ದಾಸ. ಈ ಸಂಬಂಧ ಬಿಡಿಸಲಾರದ ಸಂಬಂಧ; ಬಿಡಿಸಲಾರದ ಸಂಬಂಧ. ಇದು ತಿಂಗಳು ವರ್ಷಗಳಿಗೆ ಪರಿಮಿತವಾದದ್ದಲ್ಲ. ನೀನು ಎಲ್ಲಿಯವರೆವಿಗೆ ಇರುವೆಯೋ, ನಾನು ಎಲ್ಲಿಯವರೆವಿಗೆ ಇರುವೆನೋ ಅಲ್ಲಿಯವರೆಗೆ ನಿನಗೆ ಸೇವೆಸಲ್ಲಿಸುವುದೇ ನನ್ನ ಕರ್ತವ್ಯ. ನನ್ನಿಂದ ಸೇವೆತೆಗೆದುಕೊಳ್ಳುವುದೇ ನಿನ್ನ ಕರ್ತವ್ಯ ನಾನು ನಿನ್ನ ಸೇವಕ; ದಾಸ; ಸಂಬಳದಾಳು. ನನಗೆ ದೊಡ್ಡ ಉದ್ಯೋಗಬೇಡ ನಿನ್ನ ಮನೆಯ ಅಂಗಳ ಬಳಿಯುವ ಕೆಲಸನನ್ನದಾಗಲಿ. ಅದೇ ಮಹದ್ಭಾಗ್ಯ. ಅದೇ ದೊಡ್ಡ ಕೆಲಸ" ಎಂದು.

ರಾಜ+ಅಂಗಳ = ರಾಜಾಂಗಳ. ಈ ಶಬ್ದ ದಾಸರ ಬಾಯಿಯಿಂದ ರಾಜಂಗಳವಾಗಿ ಹೊರಬಂತು. ದಾಸರು ಕವಿಗಳು ಸ್ವತಂತ್ರರು. ಅವರು ಹೊಸ ಹೊಸ ಶಬ್ದಗಳಸ್ರಷ್ಟಾರರು. ಭಾಷೆ ಒಂದೇ ರೂಪದಲ್ಲಿ ಸ್ಥಿರವಾಗಿರುವುದಲ್ಲ. ಅದು ನಿತ್ಯ ನೂತನ ಬೆಳವಣಿಗೆ ಉಳ್ಳದು. ಬೆಳೆಯುವುದು ಅದರ ಸ್ವಭಾವ. ಹೊಸಹೊಸ ಶಬ್ದಾರ್ಥಗಳು ಭಾಷಾಕೋಶದಲ್ಲಿ ಸೇರುತ್ತಲೇ ಇರುತ್ತವೆ. ಕನ್ನಡಭಾಷಾಕೋಶಕ್ಕೆ ಪ್ರಸನ್ನವೆಂಕಟದಾಸರು ನೀಡಿದ ಕಾಣಿಕೆ ಈ 'ರಾಜಂಗಳ' ಶಬ್ದ. ಯಾವ ಕೋಶದಲ್ಲೂ ಈ ರಾಜಂಗಳ ಶಬ್ದಕ್ಕೆ ಅರ್ಥದೊರೆಯುವುದಿಲ್ಲ. ರಾಜ ಎಂದರೆ ಶ್ರೇಷ್ಠ. ಅಂಗಳ ಎಂದರೆ ಮನೆಯ ಮುಂದಿನ ಬೈಲು. ನಿಜ ಭಗವಂತನ ಮಂದಿರಗಳ ಮುಂದಿರುವ ಅಂಗಳಗಳು ಶ್ರೇಷ್ಠವಾದವುಗಳೇ. ನಿರಂತರ ಭಕ್ತರು, ಜ್ಞಾನಿಗಳ

ಸಂಚಾರದಿಂದ ಪವಿತ್ರವಾದವುಗಳು. ಆ ಅಂಗಳಗಳ ಮಣ್ಣು ಪರಮಪವಿತ್ರವಾದ ಮಣ್ಣು. ಇದರಿಂದಾಗಿಯೇ ಭಕ್ತರೆಲ್ಲರೂ ದೇವಾಲಯದ ಅಂಗಳದಲ್ಲಿ ಸಾಷ್ಟಾಂಗ ಬೀಳುತ್ತಾರೆ. ಹೊರಳುತ್ತಾರೆ. ಅಲ್ಲಿಯ ಮಣ್ಣನ್ನು ಮೈಗೆ ಬಳೆದು ಕೊಳ್ಳುತ್ತಾರೆ. ಪ್ರಸನ್ನವೇಂಕಟದಾಸರು ಈ ಮರ್ಮ ಬಲ್ಲಯೋಗಿ, ಅಷ್ಟೇ ವಿನಯಸಂಪನ್ನರು. ಅದಕ್ಕಾಗಿಯೇ ಹರಿಮಂದಿರದ ಮುಂದಿರುವ ಅಂಗಳದ ಕಸಗುಡಿಸುವ ಕೆಲಸವನ್ನು ಬಯಸಿದರು. ತಮ್ಮ ಪಾರ್ಥನೆಯನ್ನು ಶ್ರೀನಿವಾಸನ ಮುಂದಿರಿಸಿದರು. "ರಾಜಂಗಳ ಸವಡಿಪೆ ಶ್ರೀನಿವಾಸ" ಎಂದು. ಪ್ರಾಯಃ ಪ್ರಸನ್ನ ವೇಂಕಟದಾಸರ ಈ ಪ್ರಾರ್ಥನೆಯೇ ವಿಜಯದಾಸರ ಶಿಷ್ಯರೆನಿಸಿದ ವೇಣುಗೋಪಾಲವಿಠಲ ದಾಸರಿಗೆ (ಪಂಗನಾಮ ತಿಮ್ಮಣ್ಣದಾಸರಿಗೆ) ಸ್ಫೂರ್ತಿಯಾಗಿರಲು ಸಾಧ್ಯ. ಆದವಾನಿ ವೇಣುಗೋಪಾಲವಿಠಲದಾಸರ ಪ್ರಾರ್ಥನಾರೂಪ ಕೀರ್ತನೆಯ ಸ್ವರೂಪ ಈ ಕೆಳಕಂಡಂತೆ ಇದೆ.

**ಸಂಬಳಕಿಟ್ಟು ಕೊಳ್ಳೋ ಕೃಷ್ಣಾಕೃಪಾಳೋ ॥ಪ॥**

**ಸಂಬಳಕಿಟ್ಟು ಕೊ ನಿನ್ನಂಬಾಲದಲ್ಲಿರ ಬೇ–**
**ಕೆಂಬುದೇ ಎನಗೆ ತುಂಬಿತುಳುಕುತಿದೆ ॥ಅ. ಪ.॥**

**ಅರಕವಡಿ ಒಲ್ಲೆ ಸಂಬಳ ನಿನ್ನ**
**ಸರ್ವೆಳಿ ಮಾಡುವೆ ಗೋಪಾಳ**
**ಪರಟಿ ತಂಬೂರಿ ಹಿಡಿದು – ತಿರಿದುಂಡು ಕೊಂಡು ಬಂದು**
**ಕರೆದಾ ಕೆಲಸಕ್ಕೆ ಸಿದ್ಧನಾಗುವೆ ಈ ಕ್ಷಣ ॥1॥**

**ಮಧ್ವರಾಯರ ಮನೆಯೊಳು ಅನುಗಾಲ**
**ಇದ್ದೆ ಕೇಳಿಕೊ ಗುಣಗಳ**
**ಪ್ರದ್ಯುಮ್ನ ಇವು ನಿನ್ನ ಬುದ್ಧಿಗೆ ಬಂದರೆ**
**ಇದ್ದರೆ ಇರಲಿ ಎಂಬೊದಿದ್ದರೆ ಈ ಕ್ಷಣ ॥2॥**

**ಬಲುಮಂದಿನ್ನಾ ನೋಡಿದೆ ನಿನ್ನಂಥವರ**
**ಎಲ್ಲಿ ನಾ ನೋಡಲಿಲ್ಲ**
**ಲೋಲ ಶ್ರೀವೇಣುಗೋಪಾಲವಿಠಲ ನಿನ್ನ**
**ಕೂಲೀ ಬಂದಾಗ್ಯೂ ರಾಜ್ಯವಾಳಿದಂತೆ ॥3॥**

ಪ್ರಸನ್ನವೇಂಕಟದಾಸರ ತಿಂಗಳವನಲ್ಲ" ಎಂಬ ಚರಣ ಸೂತ್ರವಾದರೆ, ವೇಣುಗೋಪಾಲವಿಠಲದಾಸರ ಈ ಕೀರ್ತನೆ ಅದಕ್ಕೆ ಭಾಷ್ಯ. ದಾಸರ ಕೀರ್ತನೆಗಳನ್ನು ಒಳಕಣ್ಣಿನಿಂದ ನೋಡಬೇಕು. ಅವರಿಗೆ ಶರಣಾಗಬೇಕು.

ಮಾಯಾವಿ, ಶ್ರೀನಿವಾಸ, ದಾಸರನ್ನು ಕೇಳಿದ "ನಿನಗೆ ಎಷ್ಟು ಸಂಬಳ ಬೇಕು" ಎಂದು. ವೆಂಕಟನ ಕಿಂಕರರಾಗಿ, ಅವನ ಕರುಣೆಗೆ ಪಾತ್ರರಾದ ದಾಸರು, ಶ್ರೀನಿವಾಸ! ನಿನ್ನ



ದಾಸ್ಯ ಮಾತ್ರ ಕರುಣಿಸು. ದಾಸನೆಂದು ಒಮ್ಮೆ ನೋಡು. ಶಾಶ್ವತವಾಗಿ ನಿನ್ನ ಅಂಗಳ ಸವಡಿಪ ಸೇವೆಯನ್ನು ಮಾತ್ರ ಕರುಣಿಸು ಸಾಕು. ವರ ಬೇಡುವ ಭೃತನು ನಾನಲ್ಲ. ನಿನಗೆ ದಾಸನಾಗಿ ಭವಂಗಳ ದಾಟುತ್ತೇನೆ. ನಿಜ, ಶ್ರೀನಿವಾಸ ಅಂಗಿಕರಿಸಿದ ಜೀವಿಗೆ ಸಂಸಾರ ಸಾಗರ ಗೋಷ್ಪಾದವಾಗುವುದು.

ಕೊನೆಯ ಚರಣ ಪ್ರಸನ್ನ ವೇಂಕಟದಾಸರ ಆತ್ಮನಿವೇದನಭಕ್ತಿಗೆ ದೃಷ್ಟಾಂತ. ಈ ಚರಣದಲ್ಲಿ ದಾಸರು ತಮ್ಮನ್ನು ತಾವು ಶ್ರೀನಿವಾಸನ ಚರಣಾಬ್ಜಗಳಿಗೆ ಸಮರ್ಪಿಸಿಕೊಂಡಿರುವರು. "ಶ್ರೀನಿವಾಸ! ನಾನು ಒಂದು ಅರಿಯದ ಮಂದಮತಿ. ನನಗೆ ತಿಳಿದಿರುವುದು ಒಂದೆ. ನಾನು ನಿನ್ನವನು. ನಾನು ಎನ್ನುವನು. ನಿನ್ನ ಹೊರತು ಅನ್ಯಗತಿ ನಾಕಾಣೆ. ನನ್ನ ಪಾಲಿನ ಮಾತ – ಪಿತ – ಸುತ – ಭ್ರಾತ – ಬಾಂಧವ – ದೂತ – ಸತಿ – ಗುರು– ನಾಥ– ಗತಿ – ಮತಿ – ನೀತ ಸಖ ಎಲ್ಲವೂ ನೀನೇ. ಪ್ರಸನ್ನ ವೇಂಕಟಾದ್ರಿನಾಥ, ಶ್ರೀನಿವಾಸ, ಮನ್ನಿಸಿ ಸಂರಕ್ಷಿಸು. ನೀನೇ ನನ್ನವವೆಂಬ ಸಮೃದ್ಧಿಯನ್ನು ಸದಾ ಕರುಣಿಸು.

**ನಿನ್ನವ ನಿನ್ನವ ಶ್ರೀನಿವಾಸ ನಾ**
**ನನ್ನವ ನರಿಯೆನೊ ಶ್ರೀನಿವಾಸ ಅಯ್ಯ**
**ಮನ್ನಿಸೊ ತಾಯ್ತಂದೆ ಶ್ರೀನಿವಾಸ ಪ್ರ**
**ಸನ್ನ ವೇಂಕಟಾದ್ರಿ ಶ್ರೀನಿವಾಸ**

– ಹರೇ ಶ್ರೀನಿವಾಸ–

## ನಮ್ಮ ಪ್ರಕಾಶನದ ಇತರ ಪ್ರಕಟಣೆಗಳು

1. ಶ್ರೀ ಪ್ರಸನ್ನ ವೆಂಕಟವಿಜಯ" – ರೇಖಾಕಾಖಂಡಕಿ
   (ಶ್ರೀ ಪ್ರಸನ್ನ ವೆಂಕಟ ದಾಸರ ಜೀವನ ಆಧಾರಿತ ಕಾದಂಬರಿ)
   ಪ್ರಕಟಣೆ 2010, ಬೆಲೆ ರೂ. 120
2. ಶ್ರೀ ಪ್ರಸನ್ನ ವೆಂಕಟ ದಾಸರ ಸಮಗ್ರ ಕೃತಿಗಳಲ್ಲಿಯ ಆಧ್ಯಾತ್ಮಿಕ ಒಳನೋಟ, ಸಂಪುಟ – ೧
   ಶ್ರೀ ಪ್ರಸನ್ನವೆಂಕಟ ದಾಸರ ಕೃತಿ
   "ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ",
   (ನಾಮಗಳ ಸಂದರ್ಭ ಸಹಿತ – ಅರ್ಥವಿವರಣೆ)
   (ಈ ಕೃತಿ "ಶ್ರೀಪ್ರಸನ್ನವೆಂಕಟ ದಾಸಾರ್ಯ ವಿರಚಿತ ಕನ್ನಡದ ಪ್ರಪ್ರಥಮ ಶ್ರೀವಿಷ್ಣು ಸಹಸ್ರನಾಮ")
   ಲೇಖಕರು – ಡಾ. ವ್ಹಿ.ಬಿ. ಕುಲಕರ್ಣಿ
   ಪ್ರಕಟಣೆ 2011, ಬೆಲೆ ರೂ. 130/–





ಮಾನ್ಯ ಶ್ರೀ ಕೆ. ಅಪ್ಪಣಾಚಾರ್ಯರು ತಿರುಮಲ–ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯ ಪ್ರೊಜೆಕ್ಟಿನ ಮೊದಲನೇಯ ವಿಶೇಷ ಅಧಿಕಾರಿಗಳಾಗಿದ್ದವರು. ನಾಡಿನ ಖ್ಯಾತ ದಾಸಸಾಹಿತ್ಯದ ವಿದ್ವಾಂಸರು. ವಿಶೇಷಾಧಿಕಾರಿಗಳಾಗಿದ್ದಾಗ ದಾಸ ಸಾಹಿತ್ಯದ ಎಲ್ಲ ಪ್ರಕಾರಗಳನ್ನು, ಭಜನಾಮಂಡಳಿಗಳನ್ನು ಸಂಘಟಿಸಿ, ಬೆಳಸಿ, ನಾಡಿನ ಎಲ್ಲ ಮೂಲೆ ಮೂಲೆಗಳಲ್ಲಿಯೂ, ಮನೆ ಮನೆಗಳಲ್ಲಿಯೂ ಎಲ್ಲ ದಾಸರ ಕೀರ್ತನೆಗಳ ನಾಮಾಮೃತ ಎಲ್ಲರ ಸದ್ಭಕ್ತರ ಬಾಯಿಯಲ್ಲಿ ನುಡಿಯುವಂತೆ ಮಾಡಿದ ಮಹಾನುಭಾವರು. ಇವರಿಗೆ ಬಾಲ್ಯದಲ್ಲಿಯೇ, ಹರಿದಾಸರಲ್ಲಿ, ಹರಿದಾಸ ಸಾಹಿತ್ಯದಲ್ಲಿ ಒಲವು ಮೂಡಿತು. ಇವರ ಹಿರಿಯರು ಇವರನ್ನೂ ಹರಿದಾಸ ಸಾಹಿತ್ಯದಿಂದಲೇ ಹರಿಸಿ ಬೆಳೆಸಿದರು. ಇವರು ಅಪರೋಕ್ಷ ಜ್ಞಾನಿಗಳಾದ ಶ್ರೀ ಗುರುಜಗನ್ನಾಥವಿಠಲ ದಾಸರ ವಂಶಸ್ಥರು. ದಾಸಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ.

'ಬಿಡೆನೋ ನಿನ್ನಂಘ್ರಿಶ್ರೀನಿವಾಸ" ಎಂಬ ಪ್ರಸನ್ನ ವೆಂಕಟರ ಕೃತಿಯೇ ಇವರ ಮನಸೆಳೆದ ಮೊದಲ ಕೃತಿ. ಮತ್ತು ಇವರ ಪಾಲಿನ ತಾರಕ ಮಂತ್ರ, ಇವರು ವಿಶೇಷ ಅಧಿಕಾರಿಗಳಾಗಿದ್ದಾಗ ನಾಡಿನ ಎಲ್ಲ ಭಜನಾಮಂಡಳಿಗಳ ಸಭ್ಯರಿಗೂ ಈ ಕೀರ್ತನೆ ತಾರಕಮಂತ್ರವನ್ನಾಗಿ ಮಾಡಿದ ಕೀರ್ತಿ ಶ್ರೀ ಅಪ್ಪಣ್ಣಾಚಾರ್ಯರದ್ದು. ಇದಕ್ಕೆ ಶ್ರೀ ಶ್ರೀನಿವಾಸನ ವಿಶೇಷ ಅನುಗ್ರಹ ಇವರಿಗಿದೆ.

ಈ ಗ್ರಂಥದಲ್ಲಿ ದಾಸರ ಕೃತಿಯಾದ, "ಬಿಡೆನೊ ನಿನ್ನಂಘ್ರಿಶ್ರೀನಿವಾಸ", ಇದು ದಾಸರ ಅತ್ಯಂತ ದೀನವಾದ, ಆರ್ತವಾದ – ಹಂಬಲಿಕೆಯ ಅನನ್ಯ ಭಾವವಾದ ಈ ಕೃತಿ ಇವತ್ತು ದಾಸವಾಣಿಯ ಮೇಲ್ಪಂಕ್ತಿಯಲ್ಲಿ ನಿಂತು ತನ್ನದೇ ಶ್ರೇಷ್ಠತೆಯಿಂದ, ವಿಶಿಷ್ಟತೆಯಿಂದ ಭಜನಾಮೃತದಲ್ಲಿ ತನ್ನದೇ ಆದ ಮೆರಗನ್ನು ಹೊತ್ತು ನಿಂತಿದೆ. ಬಹುಶಃ ದಾಸವಾಣಿಗೆ ಪೀಠಿಕೆ ಹಾಕಿಕೊಟ್ಟ ವಾಣಿ ಈ ಕೃತಿ. ಇವತ್ತಿನ ಬಹುಶಃ ಎಲ್ಲರ ನಾಲಿಗೆಯಲ್ಲಿ ಭಕ್ತಿ ಭಾವದಿಂದ ಹರಿದಾಡುವ ನಾಮಾಮೃತ ಕೂಡ. ಇವತ್ತು ಈ ದಾಸರ ಕೃತಿಯಲ್ಲಿ ಅಡಗಿದ ಆಧ್ಯಾತ್ಮಿಕ ತಿರುಳನ್ನು ಅದ್ಭುತವಾದ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಪದರು ಪದರಾಗಿ ಸಾಮಾನ್ಯ ಜನರಿಗೆ ಅರ್ಥವಾಗುವ ಹಾಗೆ ತೆರೆದಿಟ್ಟವರು ಮಾನ್ಯ ಶ್ರೀ ಕೆ. ಅಪ್ಪಣ್ಣಾಚಾರ್ಯರು. ಈ ಕೃತಿ ದಾಸಸಾಹಿತ್ಯದ ಆಧ್ಯಾತ್ಮಿಕ ಅರಿವಿಗೆ ಬೆಳಗುವ ನಂದಾದೀಪ. ಇದು ಇವರು ದಾಸ ಸಾಹಿತ್ಯಕ್ಕೆ ನೀಡಿದ ಅತ್ಯಮ್ಮೂಲ್ಯವಾದ ಕೊಡುಗೆ.

– ಪ್ರಕಾಶಕರು

